CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಏಪ್ರಿಲ್ ೮, ೨೦೦೪ (ಚೈತ್ರ ೧೯, ಶಕ ವರ್ಷ ೧೯೨೬) | ಸಂಚಿಕೆ ೧೫ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು.

### ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ಲಾಗಿಂಗ್ ಕಾಮಗಾರಿಗಳನ್ನು ನೀಡುವ ಬಗ್ಗೆ

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ: ಎಎಚ್‌ಎಫ್‌ಎಫ್ 110 ಎಫ್‌ಎಡಿ 90 ದಿನಾಂಕ 16-11-1990.
2. ಸರ್ಕಾರದ ಆದೇಶ ಸಂಖ್ಯೆ: ಎಎಚ್‌ಎಫ್‌ಎಫ್ 92 ಎಫ್‌ಎಡಿ 91ದಿನಾಂಕ 05-09-1991.
3. ಸರ್ಕಾರದ ಆದೇಶ ಸಂಖ್ಯೆ: ಎಎಚ್‌ಎಫ್‌ಎಫ್ 92 ಎಫ್‌ಎಡಿ 2000 ದಿನಾಂಕ 13-07-2000.
4. ಸರ್ಕಾರದ ಆದೇಶ ಸಂಖ್ಯೆ: ಎಎಚ್‌ಎಫ್‌ಎಫ್ 68 ಎಫ್‌ಎಡಿ 2001 ದಿನಾಂಕ 11-11-2002.
5. ಸರ್ಕಾರದ ಆದೇಶ ಸಂಖ್ಯೆ: ಎಎಚ್‌ಎಫ್‌ಎಫ್ 07 ಎಫ್‌ಎಡಿ 2001 ದಿನಾಂಕ 09-12-2003.
6. ದಿನಾಂಕ 08-12-2003ರಂದು ಮಾನ್ಯ ಅರಣ್ಯ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡೆವಳಿಗಳು.
7. ದಿನಾಂಕ 28-01-2004ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯ ನಡೆವಳಿಗಳು.
8. ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಕ್ರಮಾಂಕ KSFIC.TEC.1.CR.6.2003-04 ದಿನಾಂಕ 19-01-2004ರ ಪತ್ರ

**ಪ್ರಸ್ತಾವನೆ:**

ಸರ್ಕಾರವು ಹಲವಾರು ಆದೇಶಗಳಲ್ಲಿ ರಾಜ್ಯದಲ್ಲಿ ಲಾಗಿಂಗ್ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ನೀಡುವ ಬಗ್ಗೆ ಮಾರ್ಗಸೂಚಿಗಳನ್ನು ರೂಪಿಸಿದೆ. ಜೂನ್ 1986ರ ನಂತರ ಕೇಂದ್ರ ಸರ್ಕಾರದ ತೀರ್ಮಾನ ಮತ್ತು ಕೇಂದ್ರ ಅರಣ್ಯ ಮಂಡಳಿಯ ಶಿಫಾರಸ್ಸನ್ನು ಆಧರಿಸಿದ ಅರಣ್ಯದ ರಾಷ್ಟ್ರೀಯ ನೀತಿಯನ್ನನುಸರಿಸಿ ಮೇಲೆ(1) ರಲ್ಲಿ ಓದಲಾದ ಆದೇಶದಲ್ಲಿ ಅರಣ್ಯ ಲಾಗಿಂಗ್ ಕಾಮಗಾರಿಗಳ ಎಲ್ಲಾ ಬೇರೆ ರೀತಿಯ ಮಜಲುಗಳನ್ನು ತೆಗೆಯಲು (to phase out all other modes of forestry operations) ಸರ್ಕಾರವು ನೀತಿ ನಿರ್ಣಯವನ್ನು ಕೈಗೊಂಡು ರಾಜ್ಯದಲ್ಲಿನ ಎಲ್ಲಾ ಲಾಗಿಂಗ್ ಕಾಮಗಾರಿಗಳನ್ನು ಹಂತ ಹಂತವಾಗಿ ಮುಂದಿನ 5 (ಐದು) ವರ್ಷಗಳಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮವು ಕೈಗೆತ್ತಿಕೊಳ್ಳಬೇಕೆಂದು ನಿರ್ದೇಶಿಸಿದೆ.

ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ಎಲ್ಲಾ ರೀತಿಯಿಂದಲೂ ಪರಿಶೀಲಿಸಿ, 1990-91ನೇ ಸಾಲಿನಿಂದ ಮತ್ತು ಮುಂದಿನ ಆದೇಶದವರೆಗೆ ಕೆನರಾ ವೃತ್ತದಲ್ಲಿ ಶೇಕಡಾ 50 ರಷ್ಟು ಲಾಗಿಂಗ್ ಕಾಮಗಾರಿಗಳನ್ನು ಅರಣ್ಯ ಕೂಲಿಕಾರರ ಸಹಕಾರ ಸಂಘಗಳಿಗೆ ವಹಿಸಿ ಇನ್ನುಳಿದ ಶೇಕಡಾ 50 ರಷ್ಟು ಲಾಗಿಂಗ್ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ವಹಿಸಲು ಹಾಗೂ ಎಲ್ಲಾ ತೆಳುವಾಗಿಸುವ ಕಾಮಗಾರಿಗಳನ್ನು (thinning operations) ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ವಹಿಸಲು ಆದೇಶಿಸಲಾಗಿತ್ತು.

ಮೇಲೆ (3) ರಲ್ಲಿ ಓದಲಾದ ಆದೇಶದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ದಿನಾಂಕ 01–06–2000 ದಿಂದ ದಿನಾಂಕ 31–05–2001 ರವರೆಗೆ ಕಟ್ಟಿಗೆ ಮತ್ತು ನೆಡುತೋಪುಗಳ ತೆಳುವಾಗಿಸುವಕೆಯೂ (thinning of plantations) ಸೇರಿದಂತೆ ಶೇಕಡಾ 75 ರಷ್ಟು ಲಾಗಿಂಗ್ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ವಹಿಸಲು ಮತ್ತು ಇನ್ನುಳಿದ ಶೇಕಡಾ 25ರಷ್ಟು ಲಾಗಿಂಗ್ ಕಾಮಗಾರಿಗಳನ್ನು 1956ರ ಸಂಘಗಳ ಕಾಯ್ದೆಯನ್ವಯ ನೋಂದಾಯಿಸಿರುವ ಉತ್ತರ ಕನ್ನಡ ಜಿಲ್ಲೆಯಲ್ಲಿನ ಅರಣ್ಯ ಕೂಲಿಕಾರರ ಸಹಕಾರ ಸಂಘಗಳಿಗೆ ವಹಿಸಲು ಆದೇಶಿಸಲಾಗಿತ್ತು.

ಈ ಆದೇಶವನ್ನು ಪ್ರಶ್ನಿಸಿ ಉತ್ತರ ಕನ್ನಡ ಜಿಲ್ಲಾ ಕೂಲಿಕಾರರ ಕ್ಷೇಮಾಭಿವೃದ್ಧಿ ಸಂಘವು ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ 38433:2000ನ್ನು ಸಲ್ಲಿಸಿ ಅನುಪಾತವನ್ನು ಪ್ರಶ್ನಿಸಿದ್ದು ಈ ರಿಟ್ ಅರ್ಜಿಯ ಮೇಲೆ ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 14–12–2000 ರಂದು ಮಧ್ಯಂತರ ಆದೇಶವನ್ನು ನೀಡಿ ಉತ್ತರ ಕನ್ನಡ ಜಿಲ್ಲಾ ಅರಣ್ಯ ಕೂಲಿಕಾರರ ಸಹಕಾರ ಸಂಘಗಳಿಗೆ ಕೆನರಾ ವೃತ್ತದ ಒಟ್ಟು ಲಾಗಿಂಗ್ ಕಾಮಗಾರಿಗಳ ಶೇಕಡಾ 50 ರಷ್ಟನ್ನು ಮುಂದಿನ ಆದೇಶದವರೆಗೆ ನಿರ್ವಹಿಸತಕ್ಕದ್ದೆಂದು ನಿರ್ದೇಶಿಸಿದೆ. ಸದರಿ ರಿಟ್ ಅರ್ಜಿಯು ತೀರ್ಮಾನಕ್ಕಾಗಿ ಮಾನ್ಯ ಉಚ್ಚನ್ಯಾಯಾಲಯದ ಮುಂದೆ ಬಾಕಿ ಇದೆ.

ಆದುದರಿಂದ ಮೇಲೆ (4) ಮತ್ತು (5)ರಲ್ಲಿ ಹೇಳಿರುವ ಆದೇಶಗಳಲ್ಲಿ ಕೆನರಾ ವೃತ್ತದ ಲಾಗಿಂಗ್ ಕಾಮಗಾರಿಗಳಲ್ಲಿ ಅರ್ಹರಿರುವ ಉತ್ತರ ಕನ್ನಡ ಜಿಲ್ಲಾ ಅರಣ್ಯ ಕೂಲಿಕಾರರ ಸಹಕಾರ ಸಂಘಗಳಿಗೆ ಶೇಕಡಾ 50 ರಷ್ಟು ಲಾಗಿಂಗ್ ಕಾಮಗಾರಿಗಳನ್ನು ಮತ್ತು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ಶೇಕಡಾ 50 ರಷ್ಟು ಕಾಮಗಾರಿಗಳನ್ನು ನೀಡುವುದನ್ನು ದಿನಾಂಕ 31–05–2004 ರವರೆಗೆ ಅಥವಾ ದಿನಾಂಕ 14–12–2000 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ನೀಡಿರುವ ಮಧ್ಯಂತರ ಆದೇಶ ತೆರವಾಗುವವರೆಗೆ ಅಥವಾ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಅರ್ಜಿ ಸಂಖ್ಯೆ 38433:2000 ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ನೀಡುವ ತೀರ್ಮಾನದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿರುತ್ತದೆ.

ಇತ್ತೀಚೆಗೆ, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ಸಾಕಷ್ಟು ಲಾಗಿಂಗ್ ಕಾಮಗಾರಿಗಳನ್ನು ನೀಡದೇ ಇರುವ ಹಾಗೂ ಅರಣ್ಯ ಇಲಾಖೆಯ ಬಹಳಷ್ಟು ಲಾಗಿಂಗ್ ಕಾಮಗಾರಿಗಳನ್ನು ವಲಯಾರಣ್ಯಾಧಿಕಾರಿಗಳ ಮುಖಾಂತರ ಅರಣ್ಯ ಇಲಾಖೆಯೇ ನಿರ್ವಹಿಸುತ್ತಿರುವ ವಿಷಯವು ಸರ್ಕಾರದ ಗಮನಕ್ಕೆ ಬಂದಿದ್ದು ನಿಗಮದ ಪುನಶ್ಚೇತನ ಯೋಜನೆಗೆ ಸಂಬಂಧಿಸಿದಂತೆ ಮಾನ್ಯ ಅರಣ್ಯ ಸಚಿವರ ಅಧ್ಯಕ್ಷತೆಯಲ್ಲಿ ನಡೆಸಿದ ಹಾಗೂ ಅದರ ಮುಂದುವರಿಕೆಯಾಗಿ ದಿನಾಂಕ 28–01–2004 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆಸಿದ ಸಭೆಗಳಲ್ಲಿ ವಿಷದವಾಗಿ ಚರ್ಚಿಸಿ, ಕೆನರಾ ವೃತ್ತದ ಲಾಗಿಂಗ್ ಕಾಮಗಾರಿಗಳನ್ನು ಹೊರತುಪಡಿಸಿ ಇನ್ನುಳಿದಂತೆ, ರಾಜ್ಯಾದ್ಯಂತ ಎಲ್ಲಾ ರೀತಿಯ ಲಾಗಿಂಗ್ ಕಾಮಗಾರಿಗಳನ್ನು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತದ ಮೂಲಕವೇ ಮಾಡಿಸಬೇಕೆಂದು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ ಅಪಜೀ 50 ಎಫ್‌ಡಿಪಿ 2004 ಬೆಂಗಳೂರು, ದಿನಾಂಕ 5ನೇ ಮಾರ್ಚ್ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಸರ್ಕಾರದ ನೀತಿ ಮತ್ತು ಮಾರ್ಗಸೂಚಿಗಳನ್ವಯ, ನ್ಯಾಯಾಲಯದಲ್ಲಿ ಪ್ರಶ್ನಿತವಾಗಿರುವ ಕೆನರಾ ವೃತ್ತದ ಲಾಗಿಂಗ್ ಕಾಮಗಾರಿಗಳನ್ನು ಹೊರತುಪಡಿಸಿ, ರಾಜ್ಯಾದ್ಯಂತ ಅರಣ್ಯ ಇಲಾಖೆಯ ಶೇಕಡಾ 100 ರಷ್ಟು ಎಲ್ಲಾ ಲಾಗಿಂಗ್ ಕಾಮಗಾರಿಗಳನ್ನು ಇನ್ನು ಮುಂದೆ ಕಡ್ಡಾಯವಾಗಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತಕ್ಕೆ ವಹಿಸಿ ಅದರ ಮುಖಾಂತರವೇ ನಿರ್ವಹಿಸುವಂತೆ ಸರ್ಕಾರವು ಈ ಮೂಲಕ ಆದೇಶಿಸಿದೆ.

ಈ ನಿಟ್ಟಿನಲ್ಲಿ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಎಲ್ಲಾ ಅಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡುವುದು. ಇದನ್ನು ಪಾಲಿಸಲು ತಪ್ಪಿದಲ್ಲಿ ತೀವ್ರವಾಗಿ ಪರಿಗಣಿಸಿ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 336

**ಕೆ.ವಿ.ಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀಮತಿ ಪಿ. ಪಾರ್ವತಮ್ಮ ಸಂಶೋಧನಾಧಿಕಾರಿ, ಪ್ರಧಾನ ಕಛೇರಿ, ಬೆಂಗಳೂರು ಇವರಿಗೆ ಸ್ವ-ಇಚ್ಛಾ ನಿವೃತ್ತಿಯನ್ನು ಮಂಜೂರು ಮಾಡಿರುವ ಕುರಿತು.

**ಓದಲಾಗಿದೆ:**
1. ಅಧಿಕಾರಿಗಳು ದಿ:28-04-2003 ರಂದು ಸಲ್ಲಿಸಿದ ಮನವಿ
2. ನಿರ್ದೇಶಕರ ಪತ್ರ ಸಂ:ಮಮಅಇ/ನಿಸಿಗೆ/20/98-99. ದಿ:05-08-2003 ಹಾಗೂ 13-11-2003.
3. ನಿರ್ದೇಶಕರ ಪತ್ರ ಸಂ:ಮಮಅಇ/ನಿಸಿಗೆ/2/98-99. ದಿನಾಂಕ: 8-1-2004.

**ಪ್ರಸ್ತಾವನೆ:**

ಶ್ರೀಮತಿ ಪಿ. ಪಾರ್ವತಮ್ಮನವರು ಉಲ್ಲೇಖಿತ (1) ದಿ: 28-4-2003 ರಂದು ಮನವಿಯನ್ನು ಸಲ್ಲಿಸಿ, ತಮಗೆ ಎರಡು ವರ್ಷಗಳಿಂದ ಸರ್ವಿಕಲ್ ಸ್ಪಾಂಡೆಲೈಟಿಸ್ ತೊಂದರೆ ಇದ್ದು, ಆರೋಗ್ಯ ಸರಿ ಇಲ್ಲದ ಕಾರಣ ದಿನಾಂಕ: 31-8-2003 ರಿಂದ ಜಾರಿಗೆ ಬರುವಂತೆ ಸ್ವ-ಇಚ್ಛಾ ನಿವೃತ್ತಿಯನ್ನು ಹೊಂದಲು ಅನುಮತಿಯನ್ನು ನೀಡಬೇಕೆಂದು ಕೋರಿರುತ್ತಾರೆ. ಇವರ ಮನವಿಯನ್ನು ಪರಿಗಣಿಸಿ,

ಸ್ವ-ಇಚ್ಛಾ ನಿವೃತ್ತಿಯನ್ನು ಹೊಂದಲು ಅನುಮತಿಯನ್ನು ನೀಡಬಹುದು- ಎಂದು ನಿರ್ದೇಶಕರು, ಉಲ್ಲೇಖ (2) ಹಾಗೂ (3)ರ ಪತ್ರಗಳಲ್ಲಿ ಸರ್ಕಾರಕ್ಕೆ ಶಿಫಾರಸ್ಸನ್ನು ಮಾಡಿರುತ್ತಾರೆ. ಶ್ರೀಮತಿ ಪಿ. ಪಾರ್ವತಮ್ಮನವರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿ, ಪರಿವೀಕ್ಷಣಾಧಿಕಾರಿಯಾಗಿ ದಿ: 14-8-1981 ರಂದು ಸೇವೆಗೆ ಸೇರಿದ್ದು ಸ್ವ-ಇಚ್ಛಾ ನಿವೃತ್ತಿ ಹೊಂದಲು ಬಯಸಿದ ದಿ: 31-8-2003 ರವರೆಗೆ ಒಟ್ಟು 22 ವರ್ಷಗಳ ಸೇವೆಯನ್ನು ಪೂರೈಸಿರುತ್ತಾರೆ.

ಶ್ರೀಮತಿ ಪಿ. ಪಾರ್ವತಮ್ಮ ರವರ ವಿರುದ್ಧ ಯಾವುದೇ ಮನೆ ಕಟ್ಟುವ ಮುಂಗಡ, ಮೋಟಾರು ವಾಹನ ಮುಂಗಡ ಅಥವಾ ಕಂಪ್ಯೂಟರ್ ಮುಂಗಡ ಇರುವುದಿಲ್ಲ. ಹಾಗೂ ಇವರ ವಿರುದ್ಧ ಯಾವುದೇ ಇಲಾಖಾ ವಿಚಾರಣೆ ಬಾಕಿಯಿರುವುದಿಲ್ಲ ಹಾಗೂ ನಡೆಸಲು ಪ್ರಸ್ತಾವನೆಯು ಇರುವುದಿಲ್ಲ. ಸದರಿ ಅಧಿಕಾರಿಗಳ ಕೋರಿಕೆಯನ್ನು ವಿವರವಾಗಿ ಪರಿಶೀಲಿಸಿ, ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ: ಮಮಇ 405 ಎಸ್‌ಜೆಡಿ 2003, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿದಂತೆ, ಪ್ರಧಾನ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇಲ್ಲಿ ಸಂಶೋಧನಾಧಿಕಾರಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀಮತಿ ಪಿ. ಪಾರ್ವತಮ್ಮರವರು ಸದರಿ ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ನಿಯಮ 285(2)ರ ಪ್ರಕಾರ ದಿ:31-03-2004 ರಿಂದ ಸ್ವ-ಇಚ್ಛಾ ನಿವೃತ್ತಿಯನ್ನು ಹೊಂದಲು ಜಾರಿಗೆ ಬರುವಂತೆ ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 337

**ಪ್ರ.ದ.ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ:** ಡಾ:ಎನ್.ಶ್ರೀರಾಮ್, ಉಪಶಸ್ತ್ರಚಿಕಿತ್ಸಕರು, ಕಾರಾವಿ ಆಸ್ಪತ್ರೆ ಮೈಸೂರು ಇವರ ಅನಧಿಕೃತ ಗೈರುಹಾಜರಾತಿ - ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸುವ ಬಗ್ಗೆ.

**ಓದಲಾಗಿದೆ:**
1. ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರ ಪತ್ರ ಸಂಖ್ಯೆ:ದೂರು.162:98-99, ದಿನಾಂಕ:15-04-99.
2. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ:ಕಾಇ 472 ಎಲ್‌ಎಸ್‌ಐ 99, ದಿನಾಂಕ: 18-6-99.
3. ಡಾ:ಎನ್.ಶ್ರೀರಾಮ್ ಇವರ ದಿನಾಂಕ: 22-7-99ರ ರಕ್ಷಣಾ ಹೇಳಿಕೆ.
4. ಸರ್ಕಾರಿ ಆದೇಶ ಸಂಖ್ಯೆ:ಕಾಇ 472 ಎಲ್‌ಎಸ್‌ಐ 99 ದಿನಾಂಕ:16-8-2000.
5. ವಿಚಾರಣಾಧಿಕಾರಿಗಳ ವರದಿ ದಿನಾಂಕ:16-1-03.
6. ಸರ್ಕಾರದ 2ನೇ ಷೋಕಾಸ್ ನೋಟೀಸ್ ಸಂಖ್ಯೆ: ಕಾಇ 472 ಎಲ್‌ಎಸ್‌ಐ 99, ದಿನಾಂಕ:6-9-03.
7. ಡಾ:ಶ್ರೀರಾಮ್, ಇವರು ಸಲ್ಲಿಸಿರುವ ರಾಜೀನಾಮೆ ಪತ್ರ ದಿನಾಂಕ: 19-9-03.
8. ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು ಇವರ ಪತ್ರ ಸಂಖ್ಯೆ: ಇಎಸ್‌ಐಎಸ್:ಇವಿ:162:98-99, ದಿನಾಂಕ: 22-11-03.

**ಪ್ರಸ್ತಾವನೆ:**

ನಿರ್ದೇಶಕರು, ಕಾರಾವಿ ಯೋಜನೆ (ವೈ) ಸೇವೆಗಳು ಇವರು ಮೇಲೆ (1)ರಲ್ಲಿ ಓದಲಾದ ದಿನಾಂಕ:15-4-99ರ ಪತ್ರದಲ್ಲಿ ಡಾ:ಎನ್. ಶ್ರೀರಾಮ್, ಉಪಶಸ್ತ್ರಚಿಕಿತ್ಸಕರು, ಕಾರಾವಿ ಆಸ್ಪತ್ರೆ, ಮೈಸೂರು ಇವರು ದಿನಾಂಕ: 22-4-1998 ರಿಂದ 19-7-98 ಮತ್ತು 21-7-98 ರಿಂದ ಕರ್ತವ್ಯಕ್ಕೆ ಅನಧಿಕೃತ ಗೈರುಹಾಜರಾಗಿರುವುದರಿಂದ ಇವರ ವಿರುದ್ಧ ಶಿಸ್ತುಕ್ರಮ ತೆಗೆದುಕೊಳ್ಳುವಂತೆ ಕೋರಿ ದೋಷಾರೋಪಣೆ ಪಟ್ಟಿಯನ್ನು ರೂಪಿಸಿ ಸಲ್ಲಿಸಿದ್ದರು. ಸದರಿ ವೈದ್ಯರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (2)ರಲ್ಲಿ ಓದಲಾದ ನೋಟೀಸಿನೊಂದಿಗೆ ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಿ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು. ಡಾ:ಎನ್. ಶ್ರೀರಾಮ್, ಉಪಶಸ್ತ್ರಚಿಕಿತ್ಸಕರು ಇವರು ದಿನಾಂಕ:22-7-99ರಂದು ಸಲ್ಲಿಸಿರುವ ತಮ್ಮ ರಕ್ಷಣಾ ಹೇಳಿಕೆಯಲ್ಲಿ ತಮ್ಮ ಅನಾರೋಗ್ಯ ಹಾಗೂ ಕೌಟುಂಬಿಕ ತೊಂದರೆಗಳಿಂದಾಗಿ ಮೈಸೂರಿನಲ್ಲಿ ತಾವು ಕರ್ತವ್ಯಕ್ಕೆ ಹಾಜರಾಗಲು ಸಾಧ್ಯವಾಗುತ್ತಿಲ್ಲವೆಂದೂ ಆದ್ದರಿಂದ ತಮ್ಮನ್ನು ಬೆಂಗಳೂರಿನ ಯಾವುದಾದರೊಂದು ಸ್ಥಳಕ್ಕೆ ನೇಮಿಸಬೇಕೆಂದು ಕೋರಿದ್ದರು.

ಸದರಿ ವೈದ್ಯರು ಸಲ್ಲಿಸಿದ್ದ ರಕ್ಷಣಾ ಹೇಳಿಕೆಯಲ್ಲಿ ತಮ್ಮ ಗೈರುಹಾಜರಾತಿಗೆ ಸಮರ್ಪಕ ಕಾರಣಗಳನ್ನು ನೀಡಿಲ್ಲದೆ ಇದ್ದುದರಿಂದ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸುವ ಸಲುವಾಗಿ ಮೇಲೆ (4)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಡಾ:ಮಲ್ಲಿಕಾ ವೈದ್ಯಕೀಯ ಅಧೀಕ್ಷಕರು, ಕಾರಾವಿ ಆಸ್ಪತ್ರೆ, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಶ್ರೀ ಎನ್. ವೀರಭದ್ರಯ್ಯ, ಪ್ರಥಮ ದರ್ಜೆ ಸಹಾಯಕರು ಕಾರಾವಿ ಆಸ್ಪತ್ರೆ, ಮೈಸೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಇಲಾಖಾ ವಿಚಾರಣೆ ನಡೆಸಲು ಆದೇಶಿಸಲಾಗಿತ್ತು. ವಿಚಾರಣಾಧಿಕಾರಿಗಳು ಮೇಲೆ (5)ರಲ್ಲಿ ಓದಲಾದ ತಮ್ಮ ವರದಿಯಲ್ಲಿ ಇವರ ವಿರುದ್ಧ ಮಾಡಲಾಗಿರುವ ಆರೋಪಗಳು ಸಾಬೀತಾಗಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ. ವಿಚಾರಣಾ ವರದಿಯ ಪ್ರತಿಯನ್ನು ಮೇಲೆ (6)ರಲ್ಲಿ ಓದಲಾದ ದಿನಾಂಕ:6-9-2003ರ ನೋಟೀಸಿನೊಂದಿಗೆ ವಿಚಾರಣಾ ವರದಿಯಲ್ಲಿನ ಅಂಶಗಳನ್ನು "ಏಕೆ ಒಪ್ಪಿಕೊಳ್ಳಬಾರದೆಂಬ" ಬಗ್ಗೆ ತಮ್ಮ ಅಹವಾಲು ಏನಾದರೂ ಇದ್ದಲ್ಲಿ 15 ದಿನಗಳೊಳಗಾಗಿ ಸಲ್ಲಿಸುವಂತೆ ಸೂಚಿಸಿ ಡಾ:ಎನ್. ಶ್ರೀರಾಮ್, ಉಪಶಸ್ತ್ರಚಿಕಿತ್ಸಕರು, ಇವರ ಕೆಂಗೇರಿ ಉಪನಗರ ಬೆಂಗಳೂರು ಇಲ್ಲಿನ ವಿಳಾಸಕ್ಕೆ ಕಳುಹಿಸಲಾಗಿತ್ತು. ಡಾ:ಎನ್. ಶ್ರೀರಾಮ್, ಉಪಶಸ್ತ್ರಚಿಕಿತ್ಸಕರು ಮೇಲೆ (7)ರಲ್ಲಿ ಓದಲಾದ ದಿನಾಂಕ:19-9-03ರ ತಮ್ಮ ಪತ್ರದಲ್ಲಿ ದಿನಾಂಕ:6-9-03ರ ನೋಟೀಸನ್ನು ಉಲ್ಲೇಖಿಸುತ್ತಾ ವಿಚಾರಣಾ ವರದಿಯಲ್ಲಿನ ಅಂಶಗಳ ಬಗ್ಗೆ ಏನನ್ನು ತಿಳಿಸದೆ ತಾವು ಹುದ್ದೆಗೆ ರಾಜೀನಾಮೆಯನ್ನು ಸಲ್ಲಿಸುತ್ತಿರುವುದಾಗಿಯೂ ತಮ್ಮ ರಾಜೀನಾಮೆಯನ್ನು ಅಂಗೀಕರಿಸುವಂತೆಯೂ ಕೋರಿರುತ್ತಾರೆ.

ನಿರ್ದೇಶಕರು, ಕಾರಾವಿ ಯೋ (ವೈ) ಸೇವೆಗಳು, ಇವರು ಮೇಲೆ (8)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಇಲಾಖಾ ವಿಚಾರಣಾ ವರದಿಯಲ್ಲಿ ಡಾ:ಶ್ರೀರಾಮ್, ಉಪಶಸ್ತ್ರಚಿಕಿತ್ಸಕರು, ಇವರು ದಿನಾಂಕ:22-4-98 ರಿಂದ 19-7-98ರ ವರೆಗೆ ಹಾಗೂ ದಿನಾಂಕ: 21-7-98 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿರುವುದರಿಂದ ಮತ್ತು ಅವರಿಗೆ ಬೆಂಗಳೂರನ್ನು ಬಿಟ್ಟು ಬೇರೆ ಕಡೆ ಕೆಲಸ ಮಾಡಲು ಇಷ್ಟವಿಲ್ಲದ ಕಾರಣ ಅವರನ್ನು ತಕ್ಷಣದಿಂದ ವಜಾಗೊಳಿಸುವುದು ಅಗತ್ಯವೆಂದು ವಿಚಾರಣಾಧಿಕಾರಿಗಳು ಅಭಿಪ್ರಾಯಪಟ್ಟಿರುವುದರಿಂದ ಹಾಗೂ ಇವರು ಇಲಾಖೆಯಿಂದ ಯಾವುದೇ ಗೃಹ ಖರೀದಿ:ರಿಪೇರಿ ಮೋಟಾರು ಸೈಕಲ್ : ವಾಹನ ಖರೀದಿ ಮುಂಗಡವನ್ನು ಪಡೆದಿರುವುದಿಲ್ಲವಾದ್ದರಿಂದ ಹಾಗೂ ಇಲಾಖಾ ವತಿಯಿಂದ ಸ್ನಾತಕೋತ್ತರ ಶಿಕ್ಷಣಕ್ಕೆ ನಿಯೋಜಿಸಿರುವುದಿಲ್ಲವಾದ್ದರಿಂದ ಕ.ಸಿ.ಸೇ. (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (VIII) ರಡಿ ಇವರನ್ನು ಸೇವೆಯಿಂದ ವಜಾ ಮಾಡಬಹುದಾಗಿದೆ ಎಂದು ಅಭಿಪ್ರಾಯಪಟ್ಟಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ:ಕಾಇ 472 ಎಲ್ಎಸ್ಐ 99, ಬೆಂಗಳೂರು, ದಿನಾಂಕ: 5ನೇ ಮಾರ್ಚ್ 2004**

ಡಾ:ಎನ್. ಶ್ರೀರಾಮ್, ಉಪಶಸ್ತ್ರಚಿಕಿತ್ಸಕರು, ಕಾರ್ಮಿಕ ರಾಜ್ಯ ವಿಮಾ ಆಸ್ಪತ್ರೆ, ಮೈಸೂರು ಇವರು ದಿನಾಂಕ:22-4-1998 ರಿಂದ 19-7-98ರ ವರೆಗೆ ಹಾಗೂ 21-7-98 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರಾಗಿದ್ದು ಇವರ ವಿರುದ್ಧ ಮಾಡಲಾದ ಗೈರುಹಾಜರಾತಿಯ ಆರೋಪಗಳು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108 ರನ್ವಯ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 8 (VIII)ರ ಅನುಸಾರ ಇವರಿಗೆ ಸರ್ಕಾರಿ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿದೆ. ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಇವರನ್ನು ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 338

**ಹೆಚ್. ವಿಶ್ವನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾರ್ಮಿಕ ಇಲಾಖೆ (ಕಾರಾವಿ ಯೋ (ವೈ) ಸೇವೆಗಳು)

**ವಿಷಯ:** ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಆಯುಕ್ತರು, ಉನ್ನತ ವೇತನ ಶ್ರೇಣಿ ಹುದ್ದೆಯನ್ನು ಸೃಜಿಸುವ ಬಗ್ಗೆ ಮಂಜೂರಾತಿ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ.ಸಿಆಸುಇ 411 ಎಸ್ಎಎಸ್ 2003, ದಿನಾಂಕ: 12-1-2004.
2. ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂಖ್ಯೆ.ಉತನಿ:ಉದ್ಯೋಗ:ಆಡಳಿತ-3: ವಿವ-85:2003-04, ದಿನಾಂಕ:17-1-2004.

**ಪ್ರಸ್ತಾವನೆ:**

ಸರ್ಕಾರಿ ಆದೇಶ ಸಂಖ್ಯೆ. ಸಿಆಸುಇ 411 ಎಸ್ಎಎಸ್ 2003, ದಿನಾಂಕ:12-1-2004 (ಓದಲಾಗಿದೆ-ಕ್ರಮಸಂಖ್ಯೆ.1)ರಲ್ಲಿ ಶ್ರೀ ಪಿ.ಎನ್. ಶ್ರೀನಿವಾಸ ಚಾರಿ, ಭಾ.ಆ.ಸೇ. (ಕೆ.ಎಸ್.88) ಇವರಿಗೆ ಐ.ಎ.ಎಸ್. ಸೂಪರ್ ಟೈಮ್ ಶ್ರೇಣಿಗೆ ಬಡ್ತಿ ನೀಡುವಾಗ ಇಲಾಖೆಯಲ್ಲಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಎಂಬ ಹೊಸ ಹುದ್ದೆಯನ್ನು ಸೃಜಿಸಿ ಆ ಹುದ್ದೆಗೆ ಸದರಿ ಅಧಿಕಾರಿಯವರನ್ನು ನೇಮಕ ಮಾಡಲಾಗಿದೆ.

ನಿರ್ದೇಶಕರು, ಉದ್ಯೋಗ ಮತ್ತು ತರಬೇತಿ ಇಲಾಖೆ, ದಿನಾಂಕ:17-1-2004 (ಓದಲಾಗಿದೆ ಕ್ರಮ ಸಂಖ್ಯೆ.2) ರಲ್ಲಿ ಸಿ.ಆ.ಸು. ಇಲಾಖೆಯು ಆದೇಶದ ದಿ:12-1-2004 ರಲ್ಲಿ ಶ್ರೀ ಪಿ.ಎನ್. ಶ್ರೀನಿವಾಸಚಾರಿ, ಭಾ.ಆ.ಸೇ. ಇವರಿಗೆ ಐ.ಎ.ಎಸ್. ಸೂಪರ್ ಟೈಮ್ ವೇತನ ಶ್ರೇಣಿಗೆ ಬಡ್ತಿ ನೀಡಿ ಇಲಾಖೆಯಲ್ಲಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆಗೆ ಹೊಸ ಹುದ್ದೆಯನ್ನು ಸೃಜಿಸಿ ಸದರಿಯವರನ್ನು ನೇಮಕ ಮಾಡಲಾಗಿದೆ. ಸದರಿ ಆದೇಶದಂತೆ ಶ್ರೀ ಪಿ.ಎನ್. ಶ್ರೀನಿವಾಸಚಾರಿ, ಭಾ.ಆ.ಸೇ. ರವರು ಹೊಸ ಹುದ್ದೆಯನ್ನು ದಿ:16-1-2004 ರಂದು ಪೂರ್ವಾಹ್ನ ಧಾರಣೆ ಮಾಡಿ ಕಾರ್ಯನಿರ್ವಹಿಸುತ್ತಿದ್ದಾರೆ. ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ, ಬೆಂಗಳೂರು ಈ ಹುದ್ದೆಯನ್ನು ಸೃಜಿಸಿರುವ ಬಗ್ಗೆ ಆಡಳಿತಾತ್ಮಕ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ. ಕಾಇ 13 ಇಟಿಐ 2004, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2004**

ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಭಾರತೀಯ ಆಡಳಿತ ಸೇವೆಯ ಉನ್ನತ ವೇತನ ಶ್ರೇಣಿ (Super time Scale) ರೂ. 18400-500-22400ಗಳ ವೇತನ ಶ್ರೇಣಿಯಲ್ಲಿ ಆಯುಕ್ತರು ಉದ್ಯೋಗ ಮತ್ತು ತರಬೇತಿ ಇಲಾಖೆಯ ಹುದ್ದೆಯನ್ನು ದಿ:16-1-2004ರ ಪೂರ್ವಾಹ್ನದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ ಯಾವುದು ಮೊದಲೋ ಅಲ್ಲಿಯವರೆಗೆ ಸೃಜಿಸಲು ಆದೇಶಿಸಿದೆ.

ಉದ್ಯೋಗ ಮತ್ತು ತರಬೇತಿ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ನಿರ್ದೇಶಕರ ಹುದ್ದೆಯನ್ನು ಮುಂದಿನ ಆದೇಶದವರೆಗೆ ಸ್ಥಗಿತಗೊಳಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ.ಎಫ್‌ಡಿ 123 ವೆಚ್ಚ-9:2004 ದಿನಾಂಕ: 1-3-2004ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 339

**ಎನ್. ಸುಬ್ರಮಣ್ಯರಾವ್**

ಪೀಠಾಧಿಕಾರಿ, ಕಾರ್ಮಿಕ ಇಲಾಖೆ (ಉದ್ಯೋಗ ಮತ್ತು ತರಬೇತಿ)

**ಇಂಧನ ಸಚಿವಾಲಯ**

**ವಿಷಯ:** ಮೆ: ಸುಭಾಷ್ ಪ್ರಾಜೆಕ್ಟ್ಸ್ ಅಂಡ್ ಮಾರ್ಕೆಟಿಂಗ್ ಲಿಮಿಟೆಡ್ ಕಂಪನಿಗೆ ಹಂಚಿಕೆಯಾಗಿರುವ 10 ಮೆ. ವ್ಯಾ. ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 19.8 ಮೆಗಾವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಡಿಇ 154 ಪಿಪಿಸಿ 94(3) ದಿನಾಂಕ 06.09.1994.
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 68 ಎನ್‌ಸಿಇ 97(1) ದಿನಾಂಕ 31.10.1997.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/08/ಎಸ್‌ಪಿಎಂಎಲ್/2004/389, ದಿನಾಂಕ: 21.02.2004.

**ಪ್ರಸ್ತಾವನೆ:**

ಮೆ: ಸುಭಾಷ್ ಪ್ರಾಜೆಕ್ಟ್ ಅಂಡ್ ಮಾರ್ಕೆಟಿಂಗ್ ಲಿಮಿಟೆಡ್ ಕಂಪನಿಗೆ ಗದಗ್ ಜಿಲ್ಲೆಯ ಕಪ್ಪದಗುಡ್ಡದಲ್ಲಿ 10 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಮೇಲೆ ಓದಲಾದ (1) ಮತ್ತು (2)ರ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸದರಿ ಜಾಗದಲ್ಲಿ ಗಾಳಿಯ ಸಾಂದ್ರತೆ ಹಾಗೂ ಬೀಸುವಿಕೆ ಅಧಿಕವಾಗಿರುವುದರಿಂದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 19.8 ಮೆ.ವ್ಯಾ.ಗೆ ಹೆಚ್ಚಿಸಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

3. ಸರ್ಕಾರವು ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 110 ಎನ್‌ಸಿಇ 2004, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2004**

4. ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ಮೆ: ಸುಭಾಷ್ ಪ್ರಾಜೆಕ್ಟ್ ಅಂಡ್ ಮಾರ್ಕೆಟಿಂಗ್ ಕಂಪನಿಗೆ ಮೇಲೆ (1) ಮತ್ತು (2)ರ ಆದೇಶದಲ್ಲಿ ಗದಗ್ ಜಿಲ್ಲೆಯ ಕಪ್ಪದಗುಡ್ಡದಲ್ಲಿ ಹಂಚಿಕೆ ಮಾಡಲಾದ 10 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 19.8 ಮೆ.ವ್ಯಾ.ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಮಂಜೂರಾತಿ ನೀಡಲಾಗಿದೆ.

5. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 340

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಹಂಚಿಕೆ ಆಗಿರುವ 2 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3 ಮೆಗಾವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 231 ಎನ್‌ಸಿಇ 2002, ದಿನಾಂಕ 10.10.2002.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಗಂಡಿಬಾಗಿಲು / 2003 / 1867, ದಿನಾಂಕ: 4.12.2003 ಮತ್ತು.
3. ಕೆಆರ್‌ಇಡಿ / 06 / ಗುಂಡಿ ಬಾಗಿಲು / 2003 / 156, ದಿನಾಂಕ: 27.1.2004.

**ಪ್ರಸ್ತಾವನೆ:**

ಮೆಸರ್ಸ್ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿ ಬಾಗಿಲು ಬಳಿ ಅಣೆಯೂರು ಹೊಳೆಗೆ ಅಡ್ಡಲಾಗಿ 2 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಹಂಚಿಕೆ ಮಾಡಲಾಗಿದೆ.

2. ಸದರಿ ಜಾಗದಲ್ಲಿ ನೀರಿನ ಹರಿವು 12 ಕ್ಯುಸೆಕ್ಸ್‌ನಿಂದ 18.9 ಕ್ಯುಸೆಕ್ಸ್ ಇರುವುದರಿಂದ ವಿದ್ಯುತ್ ಉತ್ಪಾದನಾ ಸಾಮರ್ಥ್ಯವನ್ನು 2 ಮೆಗಾವ್ಯಾಟ್‌ನಿಂದ 3 ಮೆಗಾವ್ಯಾಟ್‌ಗೆ ಹೆಚ್ಚಿಸಲು ಮೇಲೆ ಓದಲಾದ (2) (3) ರ ಪ್ರಸ್ತಾವನೆ ಮೂಲಕ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

3. ಇದನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 23 ಎನ್‌ಸಿಇ 2004, ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2004**

4. ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಮೆಸರ್ಸ್ ಎಸ್.ಎಲ್.ವಿ. ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲ್ಲೂಕಿನ ಗಂಡಿ ಬಾಗಿಲು ಬಳಿ ಅಣೆಯೂರು ಹೊಳೆಗೆ ಅಡ್ಡಲಾಗಿ ಮೇಲೆ (1)ರ ಆದೇಶದಲ್ಲಿ ಈಗಾಗಲೇ ಹಂಚಿಕೆ ಮಾಡಲಾಗಿರುವ 2 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯ ಸಾಮರ್ಥ್ಯವನ್ನು 3 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಅನುಷ್ಠಾನ ಮಾಡಲು ಮಂಜೂರಾತಿ ನೀಡಲಾಗಿದೆ.

5. ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 341

**ಕೆ.ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಬಿಂದು ಜಿ.ಎನ್., ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ ಮೀರಾಸಾಬಿಹಳ್ಳಿ, ಚಿತ್ರದುರ್ಗ ಜಿಲ್ಲೆ, ಇವರನ್ನು ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಆಕುಕ 648 ಹೆಚ್‌ಎಸ್‌ಡಿ 2002 ದಿನಾಂಕ:24-8-2002.
2. ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರ ಸಂ: ಡಿಪಿಜಿ (1) ಅಗೈಹಾ : ಚಿತ್ರದುರ್ಗ : 12 : 2003-04 ದಿನಾಂಕ:8-01-2004.

**ಪ್ರಸ್ತಾವನೆ:**

ಮೇಲೆ ಕ್ರಮಾಂಕ (1)ರಲ್ಲಿ ಓದಲಾದ ಸರ್ಕಾರಿ ಅಧಿಸೂಚನೆಯಲ್ಲಿ ಡಾ: ಬಿಂದು ಜಿ.ಎನ್., ಇವರು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ವಿಶೇಷ ನೇಮಕಾತಿ ಸಮಿತಿಯಿಂದ ಆಯ್ಕೆಗೊಂಡು ಪ್ರಾಥಮಿಕ ಆರೋಗ್ಯ ಕೇಂದ್ರ, ಮೀರಸಾಬಿಹಳ್ಳಿ, ಚಿತ್ರದುರ್ಗ ಜಿಲ್ಲೆ ಇಲ್ಲಿಗೆ ಸ್ಥಳನಿಯುಕ್ತಿಯೊಂದಿಗೆ ನೇಮಕಾತಿ ಆದೇಶ ಪಡೆದವರಾಗಿರುತ್ತಾರೆ. ಅದರಂತೆ ಸದರಿಯವರು ದಿನಾಂಕ: 6-9-2002 ರಂದು ಖಾಯಂ ಪೂರ್ವ ಸರ್ಕಾರಿ ಸೇವೆಗೆ ಸೇರಿರುತ್ತಾರೆ.

ಮೇಲೆ ಕ್ರಮಾಂಕ (2)ರಲ್ಲಿ ಓದಲಾದ ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು, ಇವರ ಪತ್ರದಲ್ಲಿ ಡಾ: ಬಿಂದು ಜಿ.ಎನ್., ಇವರು ದಿನಾಂಕ: 16-1-2003 ರಿಂದ 25-1-2003 ರ ವರೆಗೆ ಗಳಿಕೆ ರಜೆ ಹೋಗಲು ಅನುಮತಿ ಪಡೆದಿದ್ದು, ತದನಂತರ ಕರ್ತವ್ಯಕ್ಕೆ ಹಾಜರಾಗಿರುವುದಿಲ್ಲವೆಂದೂ, ಸದರಿಯವರ ಗೈರುಹಾಜರಿಯ ಅವಧಿಯು ಒಂದು ವರ್ಷಕ್ಕೂ, ಮೇಲ್ಪಟ್ಟಿದ್ದು ಖಾಯಂ ಪೂರ್ವ ಸೇವಾವಧಿಯಲ್ಲಿ ಅನಧಿಕೃತ ಗೈರು ಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977 ರ ನಿಯಮ 6(1)(2) ರನ್ವಯ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸುವ ಬಗ್ಗೆ ಪ್ರಸ್ತಾಪಿಸಿರುವುದನ್ನು ಪರಿಶೀಲಿಸಿ, ಈ ಕೆಳಕಂಡ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಕುಕ 109 ಹೆಚ್‌ಎಸ್‌ಹೆಚ್ 2004, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಲಾದ ಹಿನ್ನೆಲೆಯಲ್ಲಿ ಡಾ: ಬಿಂದು ಜಿ.ಎನ್., ವೈದ್ಯಾಧಿಕಾರಿ, ಪ್ರಾ.ಆ.ಕೇಂದ್ರ, ಮೀರಾಸಾಬಿಹಳ್ಳಿ, ಚಿತ್ರದುರ್ಗ ಜಿಲ್ಲೆ, ಖಾಯಂ ಪೂರ್ವ ಸೇವಾವಧಿಯಲ್ಲಿ ಒಂದು ವರ್ಷಕ್ಕೂ ಮೇಲ್ಪಟ್ಟು ಅನಧಿಕೃತ ಗೈರುಹಾಜರಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ಖಾಯಂ ಪೂರ್ವ) ನಿಯಮಾವಳಿ 1977 ರ ಉಪನಿಯಮ 6(1)(2) ರನ್ವಯ ದಿನಾಂಕ: 16-01-2003 ರಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 342

**ಕಾಶೀನಾಥ ಪಟವಾಡಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ಕಾರ್ಯದರ್ಶಿಗಳು ಶ್ರೀ ಯಡಿಯೂರು ಸಿದ್ದಲಿಂಗೇಶ್ವರ ದೇವಸ್ಥಾನ, ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು, ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ ಇವರ ಮೇಲೆ ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:**
1. ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ:ಸಿಬ್ಬಂದಿ/3/ಸಿಆರ್/1/2003-2004 ದಿನಾಂಕ:19/07/2003.
2. ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ, ಕಾರ್ಯದರ್ಶಿಗಳು ಯಡಿಯೂರು ಶ್ರೀ ಸಿದ್ದಲಿಂಗೇಶ್ವರಸ್ವಾಮಿ ದೇವಸ್ಥಾನರವರು ತಮ್ಮ ಆಪಾದನೆಗಳ ಬಗ್ಗೆ ಪತ್ರ ಸಂಖ್ಯೆ: ಸಿಆರ್‌ಇಎಸ್‌ಟಿ/(1)/44/2003-2004 ದಿನಾಂಕ: 07/01/2004 ರಂದು ನೀಡಿರುವ ಸಮರ್ಥನಾ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ, ಸಮೂಹ 'ಎ' ಕಿರಿಯ ಶ್ರೇಣಿ ಅಧಿಕಾರಿ ಹಾಗೂ ಕಾರ್ಯದರ್ಶಿ ಶ್ರೀ ಸಿದ್ದಲಿಂಗೇಶ್ವರಸ್ವಾಮಿ ದೇವಸ್ಥಾನ, ಯಡಿಯೂರು, ಕುಣಿಗಲ್ ತಾಲ್ಲೂಕು ಇವರು ಈ ಹಿಂದೆ ಕಾರ್ಯನಿರ್ವಾಹಕ ಅಧಿಕಾರಿಗಳು, ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಸುಬ್ರಹ್ಮಣ್ಯ, ಸೂಳ್ಯ ತಾಲ್ಲೂಕು ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಈ ಕೆಳಕಂಡ ಆರೋಪಗಳಿಗೆ ಗುರಿಯಾಗಿದ್ದರು.

1. ಫಸಲಿ 1411ರಲ್ಲಿ ಕುಕ್ಕೆ ಶ್ರೀ ಸುಬ್ರಮಣ್ಯಸ್ವಾಮಿ ದೇವಾಲಯಕ್ಕೆ ಸೇರಿದ ಚಿನ್ನ, ಬೆಳ್ಳಿ ಅಂಗಡಿಯ ಟೆಂಡರ್‌ದಾರರಾದ ಶ್ರೀ ಹರೀಶ್, ಎಸ್.ರವರಿಂದ ಬಡ್ಡಿ ಸೇರಿ ರೂ.7,75,241-00 ಹಾಗೂ ಆದಿ ಸುಬ್ರಹ್ಮಣ್ಯ ದೇವಸ್ಥಾನದ ಹಣ್ಣು ಕಾಯಿ ಅಂಗಡಿ ಟೆಂಡರ್‌ದಾರರಾದ ಶ್ರೀ ಬಿ.ಎಸ್. ದಿನೇಶ್ ಅವರಿಂದ ಬಡ್ಡಿ ಸೇರಿ ರೂ.8,13,257-00ಗಳನ್ನು ವಸೂಲಿ ಮಾಡದೆ ಕರ್ತವ್ಯ ವಿಮುಖತೆಯಿಂದ ದೇವಸ್ಥಾನಕ್ಕೆ ನಷ್ಟ ಉಂಟಾಗಲು ಕಾರಣರಾಗಿರುವುದು.
2. ಕುಕ್ಕೆ ಶ್ರೀ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ, ಸುಬ್ರಹ್ಮಣ್ಯ, ಸೂಳ್ಯ ತಾಲ್ಲೂಕು ಈ ದೇವಳಕ್ಕೆ ಸೇರಿದ ಸರ್ವೆ ನಂ.61/2 ರಲ್ಲಿರುವ ಮನೆಯ ನಂಬರ್ 2/332ರಲ್ಲಿ ಅನಧಿಕೃತವಾಗಿ ವಾಸ್ತವ್ಯವಿದ್ದ ಶ್ರೀ ವಿಶ್ವನಾಥ್ ಆಚಾರ್ಯರವರನ್ನು ಖಾಲಿ ಮಾಡಿಸಲು ಕೋರಿ ಸೂಳ್ಯ ಸಿವಿಲ್ ಜಡ್ಜ್‌ರ ನ್ಯಾಯಾಲಯದಲ್ಲಿ ಸಲ್ಲಿಸಿದ ಪ್ರಕರಣ ಎಸ್‌ಸಿ.ನಂಬರ್ 1/83ರಲ್ಲಿನ ತೀರ್ಪಿನಂತೆ ಕೋರ್ಟ್ ಅಮೀನರ ಸಮ್ಮುಖದಲ್ಲಿ ಸದರಿ ಮನೆ ಸ್ವಾಧೀನತೆ ಬಂದಿರುವುದಾಗಿ ದಿ:28.11.2001 ರಂದು ನ್ಯಾಯಾಲಯಕ್ಕೆ ಡೆಲಿವರಿ ರಶೀದಿ ಬರೆದುಕೊಟ್ಟಿದ್ದರೂ, ಸದರಿ ಕಟ್ಟಡವನ್ನು ದೇವಳದ ವಶಕ್ಕೆ ತೆಗೆದುಕೊಳ್ಳದೆ ಬಾಡಿಗೆದಾರರಿಗೆ ವಾಸಿಸಲು

ಅನುವು ಮಾಡಿಕೊಟ್ಟು, ಕರ್ತವ್ಯ ಲೋಪ ಎಸಗಿದ್ದಲ್ಲದೆ ದೇವಾಲಯದ ಹಿತಕ್ಕೆ ವಿರುದ್ಧವಾಗಿ ವರ್ತಿಸಿ ಸರ್ಕಾರಿ ಅಧಿಕಾರಿಗೆ ಸಲ್ಲದ ರೀತಿಯಲ್ಲಿ ವರ್ತಿಸಿರುವುದು.

ಮೇಲೆ ಓದಲಾದ ಕ್ರಮ ಸಂಖ್ಯೆ:(1)ರಲ್ಲಿನ ಪತ್ರದಲ್ಲಿ ಧಾರ್ಮಿಕ ದತ್ತಿ ಆಯುಕ್ತರು, ಸದರಿಯವರ ಮೇಲಿನ ಆರೋಪಗಳ ಬಗ್ಗೆ ಆರೋಪ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ಸರ್ಕಾರವು ಈ ಆರೋಪಣಾ ಪಟ್ಟಿಯನ್ನು ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ರವರಿಗೆ ಕಳುಹಿಸಿ ಅವರ ಸಮಜಾಯಿಸಿ ಹೇಳಿಕೆಯನ್ನು ಕೇಳಲಾಗಿ ಅವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಪತ್ರ ದಿನಾಂಕ:07.01.2004 ರಂದು ಸಲ್ಲಿಸಿರುವ ಹೇಳಿಕೆಯಲ್ಲಿ ಅವರ ಮೇಲಿನ ಆಪಾದನೆಗಳನ್ನು ಅಲ್ಲಗಳೆದಿದ್ದಾರೆ. ಅವರ ಸಮಜಾಯಿಷಿ ಹೇಳಿಕೆಯನ್ನು ಪರಿಶೀಲಿಸಲಾಗಿ ಅವು ಸಮರ್ಪಕವಾಗಿರದೇ ಇರುವುದು ಹಾಗೂ ನಿಯಮ ಉಲ್ಲಂಘನೆ ಮಾಡಿರುವುದು ಮೇಲುನೋಟಕ್ಕೆ ಕಂಡು ಬಂದಿದೆ. ಆದ್ದರಿಂದ ಈ ಆರೋಪಗಳ ಬಗ್ಗೆ ಸತ್ಯಾಸತ್ಯತೆಯನ್ನು ತಿಳಿದುಕೊಳ್ಳಲು ಈ ಆರೋಪಿತ ಅಧಿಕಾರಿಯ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ಸರ್ಕಾರವು ತೀರ್ಮಾನಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಕಂಇ 159 ಮುಸೇವಿ 2003, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಸಿ. ಸಿ. ಎ) ನಿಯಮಾವಳಿ 1957ರ ನಿಯಮ 11 ರಡಿಯಲ್ಲಿ ಪ್ರದತ್ತವಾದ ಅಧಿಕಾರದನ್ವಯ ಶ್ರೀ ಎಂ.ಎಸ್. ವೆಂಕಟೇಶ್‌ಮೂರ್ತಿ ಸಮೂಹ 'ಎ' (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಕಾರ್ಯದರ್ಶಿ ಶ್ರೀ ಸಿದ್ದಲಿಂಗೇಶ್ವರಸ್ವಾಮಿ ದೇವಸ್ಥಾನ, ಯಡಿಯೂರು, ಕುಣಿಗಲ್ ತಾಲ್ಲೂಕು ಹಾಗೂ ಹಿಂದಿನ ಕಾರ್ಯನಿರ್ವಾಹಕ ಅಧಿಕಾರಿಗಳು, ಕುಕ್ಕೆ ಶ್ರೀ ಸುಬ್ರಹ್ಮಣ್ಯ ದೇವಸ್ಥಾನ, ಸುಬ್ರಹ್ಮಣ್ಯ, ಸೂಳ್ಯ ತಾಲ್ಲೂಕು ಇವರ ವಿರುದ್ಧ ಮಾಡಿರುವ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ಜರುಗಿಸಲು ಶ್ರೀ ಎಸ್. ಸಂಗೊಳ್ಳಿ, ಜಿಲ್ಲಾ ಮತ್ತು ಸೆಷನ್ ನ್ಯಾಯಾಧೀಶರು (ನಿವೃತ್ತ), ನಂ.415/2, ಎಫ್ ಬ್ಲಾಕ್, ಸಹಕಾರ ನಗರ, ಬೆಂಗಳೂರು-92 ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ. ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ಸಿ.ಸಿ.ಎ) ನಿಯಮಗಳು 1957ರ ನಿಯಮ 11 (5) (ಸಿ)ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಧಾರ್ಮಿಕ ದತ್ತಿ ಆಯುಕ್ತರ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ವಿಚಾರಣಾಧಿಕಾರಿಗಳು ಕೆ.ಸಿ.ಎಸ್. (ಸಿ.ಸಿ.ಎ) ನಿಯಮ 1957ರ ನಿಯಮ 11 ಮತ್ತು 11(ಎ) ರಲ್ಲಿನ ವಿಧಿ ವಿಧಾನಗಳಿಗನುಸಾರ ವಿಚಾರಣೆ ಜರುಗಿಸಿ ವಿಚಾರಣಾ ವರದಿಯನ್ನು 3 (ಮೂರು) ತಿಂಗಳೊಳಗಾಗಿ ಸರ್ಕಾರಕ್ಕೆ ಒಪ್ಪಿಸುವಂತೆ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 343

**ಸಿ. ಸರೋಜ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಂದಾಯ ಇಲಾಖೆ (ಮುಜರಾಯಿ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ:** ರೇಷ್ಮೆ ಇಲಾಖೆಯ ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ವಿಜಯಪುರ ಅವ್ಯವಹಾರ ಶಿಸ್ತುಕ್ರಮ ಜಂಟಿ ವಿಚಾರಣೆ ಬಗ್ಗೆ.

**ಓದಲಾಗಿದೆ:**

1. ಸಿಬ್ಬಂದಿ:3 ಶಿಸ್ತು:ರೇವೀಂ:20:02-03 ದಿನಾಂಕ:24-2-03.
2. ಆದೇಶ ಸಂ:ವಾಕೈ 97 ರೇಸೇವಿ 2002 ದಿನಾಂಕ: 7.3.2003.
3. ಆದೇಶ ಸಂ:ವಾಕೈ 97 ರೇಸೇವಿ 2003 ದಿನಾಂಕ: 22.7.2003.
4. ಕಾರಣ ಕೇಳುವ ನೋಟೀಸು ಇದೇ ಸಮಸಂಖ್ಯೆ ದಿನಾಂಕ:14.11.2003.
5. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಇವರ ಅರೆ ಸರ್ಕಾರಿ ಪತ್ರ ಸಂಖ್ಯೆ: ಸಿಬ್ಬಂದಿ 3ಎ/ಶಿಸ್ತು/22/2002-03 ದಿನಾಂಕ: 3.10.2003.
6. ಶ್ರೀ ಡಿ.ವಿ. ವಿಷ್ಣುಕುಮಾರ್, ಇವರ ರಕ್ಷಣಾ ಹೇಳಿಕೆ ದಿನಾಂಕ: 12-1-2004.
7. ಶ್ರೀ ಎಂ.ವಿ. ಚಂದ್ರು, ಇವರ ರಕ್ಷಣಾ ಹೇಳಿಕೆ ದಿನಾಂಕ:29.11.2003.
8. ಶ್ರೀ ಎ. ಹನುಮಂತಯ್ಯ, ಇವರ ರಕ್ಷಣಾ ಹೇಳಿಕೆ ದಿನಾಂಕ:27.12.2003.
9. ಶ್ರೀ ಎಂ.ವಿ. ಶ್ರೀನಿವಾಸ್, ಇವರ ರಕ್ಷಣಾ ಹೇಳಿಕೆ ದಿನಾಂಕ: 10.1.2004.

**ಪ್ರಸ್ತಾವನೆ:**

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲೆ ಓದಲಾದ (1)ರ ಪತ್ರದಲ್ಲಿ ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ವಿಜಯಪುರದಲ್ಲಿ ರೇಷ್ಮೆ ಗೂಡಿಗೆ ನೀಡುವ ಪ್ರೋತ್ಸಾಹಧನದ ವಿತರಣೆಯಲ್ಲಿ ನಡೆದಿದೆ ಎನ್ನಲಾದ ಅವ್ಯವಹಾರದ ಬಗ್ಗೆ ವರದಿ ಮಾಡಿ ಅದಕ್ಕೆ ಸಂಬಂಧಿಸಿದ ಅಧಿಕಾರಿ:ನೌಕರರನ್ನು ಅಮಾನತ್ತುಗೊಳಿಸಲು ಮಾಡಲಾದ ಶಿಫಾರಸ್ಸಿನನ್ವಯ ಮೇಲೆ ಓದಲಾದ (2) ಆದೇಶದಲ್ಲಿ ಈ ಕೆಳಕಂಡ ಅಧಿಕಾರಿಗಳು:ನೌಕರರನ್ನು ವಿಚಾರಣೆಯನ್ನು ಕಾಯ್ದಿರಿಸಿ ಅಮಾನತ್ತಿನಲ್ಲಿಡಲಾಗಿತ್ತು.

| | | |
|---|---|---|
| 1. | ಶ್ರೀ ಡಿ.ವಿ. ವಿಷ್ಣುಕುಮಾರ್ | ರೇಷ್ಮೆ ಉಪ ನಿರ್ದೇಶಕರು |
| 2. | ಶ್ರೀ ಎಂ.ವಿ. ಚಂದ್ರು | ಸಹಾಯಕ ರೇಷ್ಮೆ ನಿರ್ದೇಶಕರು |
| 3. | ಶ್ರೀ ಎ. ಹನುಮಂತಯ್ಯ | ರೇಷ್ಮೆ ವಿಸ್ತರಣಾಧಿಕಾರಿ |
| 4. | ಶ್ರೀ ಎಸ್.ವಿ. ಶ್ರೀನಿವಾಸ್ | ರೇಷ್ಮೆ ಪ್ರವರ್ತಕ (ಸಂ) |
| 5. | ಶ್ರೀ ಮುನಿಶ್ಯಾಮಪ್ಪ | ದಿನಗೂಲಿ ನೌಕರ |

ಆ ನಂತರ ಇವರುಗಳ ವಿರುದ್ಧ ಮಾಡಿರುವ ಆರೋಪಗಳಿಗೆ ಸಂಬಂಧಿಸಿದಂತೆ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ ಅವರ ಅಮಾನತ್ತನ್ನು ತೆರವುಗೊಳಿಸಿ ಸೇವೆಗೆ ಪುನರ್ ನೇಮಕ ಮಾಡಿ ಮೇಲೆ ಓದಲಾದ (3) ಆದೇಶದಲ್ಲಿ ನೇಮಿಸಿದೆ.

ಈ ಪ್ರಕರಣದಲ್ಲಿ ಭಾಗಿಯಾಗಿರುವ ಶ್ರೀ ಮುನಿಶ್ಯಾಮಪ್ಪನವರು ದಿನಗೂಲಿ ನೌಕರರಾಗಿದ್ದು ಇವರು ಸಿ.ಸಿ.ಎ ನಿಯಮಗಳ ವ್ಯಾಪ್ತಿಗೆ ಬರುವುದಿಲ್ಲವಾದ್ದರಿಂದ ನಿರ್ದೇಶನಾಲಯದ ಮಟ್ಟದಲ್ಲಿಯೇ ಸೂಕ್ತ ಕ್ರಮ ಕೈಗೊಳ್ಳಲಾಗುವುದೆಂದು ಮೇಲೆ ಓದಲಾದ (5)ರ ಪತ್ರದಲ್ಲಿ ರೇಷ್ಮೆ ನಿರ್ದೇಶಕರು ತಿಳಿಸಿದ್ದುದರನ್ವಯ ಇವರನ್ನು ಹೊರತುಪಡಿಸಿ ಉಳಿದ ಅಧಿಕಾರಿ:ನೌಕರರುಗಳ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ದೋಷಾರೋಪಣೆ ಪಟ್ಟಿಗಳನ್ನು ಅವರುಗಳಿಗೆ ಮೇಲೆ ಓದಲಾದ (4)ರ ಪತ್ರಗಳಲ್ಲಿ ಪ್ರತ್ಯೇಕವಾಗಿ ಜಾರಿ ಮಾಡಿ ರಕ್ಷಣಾ ಹೇಳಿಕೆಗಳನ್ನು ಪಡೆಯಲಾಗಿದೆ. ಅವರುಗಳು ತಮ್ಮಗಳ ಮೇಲೆ ಮಾಡಲಾಗಿರುವ ಆರೋಪಗಳನ್ನು ನಿರಾಕರಿಸಿ ಅವರುಗಳ ಮೇಲಿನ ಆರೋಪಗಳನ್ನು ಕೈಬಿಟ್ಟು ದೋಷಮುಕ್ತರನ್ನಾಗಿಸಲು ಕೋರಿದ್ದಾರೆ.

ಆದುದರಿಂದ ಈ ಪ್ರಕರಣದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ಜಂಟಿ ವಿಚಾರಣೆಯ ಅವಶ್ಯಕತೆ ಇದೆ ಎಂದು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 97 ರೇಸೇವಿ 2003, ಬೆಂಗಳೂರು, ದಿನಾಂಕ: 11ನೇ ಮಾರ್ಚ್ 2004**

ಸರ್ಕಾರಿ ರೇಷ್ಮೆ ಗೂಡು ಮಾರುಕಟ್ಟೆ, ವಿಜಯಪುರ, ಇಲ್ಲಿ ರೇಷ್ಮೆ ಗೂಡಿಗೆ ನೀಡುವ ಪ್ರೋತ್ಸಾಹಧನದ ವಿತರಣೆಯಲ್ಲಿ ನಡೆಯಿತೆನ್ನಲಾದ ಅವ್ಯವಹಾರಗಳ ಕುರಿತಂತೆ, ಈ ಕೆಳಗಿನ ಅಧಿಕಾರಿಗಳು:ನೌಕರರ ವಿರುದ್ಧ ಮಾಡಲಾಗಿರುವ ದೋಷಾರೋಪಣೆಗಳ ಬಗ್ಗೆ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ 13ರ ಪ್ರಕಾರ ಜಂಟಿ ವಿಚಾರಣೆ ನಡೆಸಲು ಆದೇಶಿಸಿದೆ.

| | | |
|---|---|---|
| 1. | ಶ್ರೀ ಡಿ.ವಿ. ವಿಷ್ಣುಕುಮಾರ್ | ರೇಷ್ಮೆ ಉಪ ನಿರ್ದೇಶಕರು |
| 2. | ಶ್ರೀ ಎಂ.ವಿ. ಚಂದ್ರು | ಸಹಾಯಕ ರೇಷ್ಮೆ ನಿರ್ದೇಶಕರು |
| 3. | ಶ್ರೀ ಎ. ಹನುಮಂತಯ್ಯ | ರೇಷ್ಮೆ ವಿಸ್ತರಣಾಧಿಕಾರಿ |
| 4. | ಶ್ರೀ ಎಸ್.ವಿ. ಶ್ರೀನಿವಾಸ್ | ರೇಷ್ಮೆ ಪ್ರವರ್ತಕ (ಸಂ) |
| 5. | ಶ್ರೀ ಮುನಿಶ್ಯಾಮಪ್ಪ | ದಿನಗೂಲಿ ನೌಕರ |

ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11ರ ಉಪ ನಿಯಮ (5)ನ್ನು ಓದಿಕೊಂಡಂತೆ ಅದೇ ನಿಯಮದ ಉಪ ನಿಯಮ (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ವಿಚಾರಣೆಯನ್ನು ನಡೆಸಲು ರೇಷ್ಮೆ ಅಪರ ನಿರ್ದೇಶಕರು, ರೇಷ್ಮೆ ಇಲಾಖೆ, ಬೆಂಗಳೂರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿದೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಗಳು 1957ರ ನಿಯಮ 11(5) (ಸಿ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ರೇಷ್ಮೆ ಉಪ ನಿರ್ದೇಶಕರು (ಬೀಜೋತ್ಪಾದನೆ ಮತ್ತು ಕೃಷಿ ಕ್ಷೇತ್ರಗಳು) ಕೇಂದ್ರ ಕಛೇರಿ, ಬೆಂಗಳೂರು, ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿದೆ.

ಸದರಿ ವಿಚಾರಣೆಗಳನ್ನು 3 ತಿಂಗಳೊಳಗೆ ಪೂರ್ಣಗೊಳಿಸಿ ವಿಚಾರಣೆ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುವಂತೆ ನಿರ್ದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 344

**ಮಂಜೇಗೌಡ**

ಸರ್ಕಾರದ ಅಧೀನ ಕಾರ್ಯದರ್ಶಿ (ರೇಷ್ಮೆ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## URBAN DEVELOPMENT SECRETARIAT

## CORRIGENDUM

**No. UDD 56 PRJ 99, Bangalore, Dated: 10th March 2004**

In Government Order No. UDD 56 PRJ 99, dated 28-2-2004 regarding "Freezing of development activities on lands required for Bangalore Metro Rail East-West and North-South Corridor of Bangalore Metro Rail Project":-

(i) the places specified in Item 5 of (A) under I East-West Corridor viz., "Trinity circle to Queen's Statue at Cricket Stadium along MG Road" shall be corrected and shall always be read as "TRINITY CIRCLE TO MAYOHALL"; and

(ii) the places mentioned at (B) underground under I East-West Corridor, shall be corrected and shall always be read as, "Mayo Hall-Cubbon Park along Bal Bhavan Road- Dr.Ambedkar Road (from M.S.Building upto K.R.Circle)- along District Office Road - Post Office road, Majestic Circle near SBM-K.G.Road - KSRTC Bus Stand - Below Railway Station - Magadi Road upto Leprosy Hospital"

By Order and in the name of the Governor of Karnataka,

P.R. 345

**V.R. ILKAL**

Under Secretary to Government, Urban Development Department.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಅಟ್ಟಿಲಕ್ಕಮ್ಮ ವಿದ್ಯಾ ಸಂಸ್ಥೆ, ಮಹದೇಶ್ವರ ನಗರ, ಚನ್ನಪಟ್ಟಣ, ಚನ್ನಪಟ್ಟಣ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ ಈ ಸಂಸ್ಥೆಗೆ ನೇಮಕವಾಗಿದ್ದ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಕಂಇ 33 ಮುನೋಸೊ 99, ದಿನಾಂಕ:2-3-2002.
2. ರಿಟ್ ಪಿಟಿಷನ್ 8675/2002ರಲ್ಲಿ ಉಚ್ಛ ನ್ಯಾಯಾಲಯದ ಆದೇಶ ದಿನಾಂಕ:30-7-2002.
3. WA 5122/02 C/W W.A.4936/09(GM)in WA 5122/02ರಲ್ಲಿ ಉಚ್ಛ ನ್ಯಾಯಾಲಯದ ಆದೇಶ ದಿನಾಂಕ:1-8-2003.
4. ಸರ್ಕಾರಿ ಆದೇಶ ಸಂಖ್ಯೆ:ಕಂಇ 33 ಮುನೋಸೋ 99, ದಿನಾಂಕ:28-8-2003 ಮತ್ತು 20-9-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಶ್ರೀ ಅಟ್ಟಿಲಕ್ಕಮ್ಮ ವಿದ್ಯಾ ಸಂಸ್ಥೆ, ಮಹದೇಶ್ವರ ನಗರ, ಚನ್ನಪಟ್ಟಣ, ಈ ಸಂಸ್ಥೆಗೆ 6 ತಿಂಗಳ ಅವಧಿಗೆ ಆಡಳಿತಾಧಿಕಾರಿ ನೇಮಕ ಮಾಡಲಾಗಿತ್ತು. ಓದಲಾದ (2)ರ ಪ್ರಕಾರ ಉಚ್ಛ ನ್ಯಾಯಾಲಯವು ಆಡಳಿತಾಧಿಕಾರಿ ನೇಮಕವನ್ನು ರದ್ದುಪಡಿಸಿತ್ತು. ಓದಲಾದ (3)ರ ಪ್ರಕಾರ ಉಚ್ಛ ನ್ಯಾಯಾಲಯವು ಆಡಳಿತಾಧಿಕಾರಿ ನೇಮಕಾತಿ ರದ್ದುಪಡಿಸಿದ ಆಜ್ಞೆಯನ್ನು ದಿನಾಂಕ:1-8-2003ರಿಂದ ತೆರವುಗೊಳಿಸಿ ಆದೇಶಿಸಿದೆ. ಈ ಹಿನ್ನೆಲೆಯಲ್ಲಿ ಸಂಸ್ಥೆಗೆ ನೇಮಕ ಮಾಡಿದ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವುದು ಸೂಕ್ತವೆಂದು ಮನಗಂಡು ಓದಲಾದ (4)ರ ಪ್ರಕಾರ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 1-3-2004 ರವರೆಗೆ ವಿಸ್ತರಿಸಲಾಗಿತ್ತು. ಈಗ ಆಡಳಿತಾಧಿಕಾರಿ ಅವಧಿಯು 1-3-2004ಕ್ಕೆ ಮುಗಿದಿರುವುದರಿಂದ ಮುಂದಿನ ಅವಧಿಗೆ ಸರ್ಕಾರವು ಆಡಳಿತಾಧಿಕಾರಿಯವರ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 12 ಮುನೋಸೊ 2004, ಬೆಂಗಳೂರು, ದಿನಾಂಕ: 8ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀ ಅಟ್ಟಿಲಕ್ಕಮ್ಮ ವಿದ್ಯಾ ಸಂಸ್ಥೆ, ಮಹದೇಶ್ವರ ನಗರ, ಚನ್ನಪಟ್ಟಣ, ಚನ್ನಪಟ್ಟಣ ತಾಲ್ಲೂಕು, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ನೇಮಕವಾದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:2-3-2004 ರಿಂದ 1-9-2004 ರವರೆಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 346

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಶ್ರೀರಾಂಪುರ ಉಪ ನೋಂದಣಿ ಕಛೇರಿ ಕಟ್ಟಡ ಬಾಡಿಗೆ ಪರಿಷ್ಕರಣೆ ಕುರಿತು.

**ಓದಲಾಗಿದೆ:** ನೋಂದಣಿ ಮಹಾಪರಿವೀಕ್ಷಕರ ಮತ್ತು ಮುದ್ರಾಂಕಗಳ ಆಯುಕ್ತರವರ ವರದಿ ಸಂಖ್ಯೆ ಬಿಎಲ್‌ಡಿ 14:2002-03, ದಿನಾಂಕ:1-12-2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ನೋಂದಣಿ ಮಹಾಪರಿವೀಕ್ಷಕರ ಮತ್ತು ಮುದ್ರಾಂಕಗಳ ಆಯುಕ್ತರವರು ಪ್ರಸ್ತಾವನೆ ಸಲ್ಲಿಸಿ ಶ್ರೀರಾಂಪುರ ಉಪ ನೋಂದಣಿ ಕಛೇರಿ ಕಾರ್ಯನಿರ್ವಹಿಸುತ್ತಿರುವ ಕಟ್ಟಡದ ಬಾಡಿಗೆಯನ್ನು ದಿನಾಂಕ:1-5-1997 ರಿಂದ ಪರಿಷ್ಕರಿಸಲು ಹಾಗೂ ದಿನಾಂಕ:13-8-2001ರಿಂದ ಗಣಕೀಕರಣಕ್ಕಾಗಿ ಹೆಚ್ಚುವರಿ ಸ್ಥಳವನ್ನು ಪಡೆಯಲಾಗಿದ್ದು ದಿನಾಂಕ:1-5-97 ರಿಂದ 31-3-2003ರವರೆಗೆ 8/-ರೂ.ಗಳಂತೆ ಹಾಗೂ 1-4-2003 ರಿಂದ ಚದರ ಅಡಿ ಕಾರ್ಪೆಟ್ ಏರಿಯಾಗೆ ರೂ.12/- ಪ್ರಚಲಿತ ಮಾರುಕಟ್ಟೆ ದರ ಲೋಕೋಪಯೋಗಿ ಇಲಾಖೆಯವರು ನಿಗದಿಪಡಿಸಿದ್ದಾರೆ. ಆದ್ದರಿಂದ ಉಪ ನೋಂದಣಿ ಕಛೇರಿ ಕರ್ತವ್ಯ ನಿರ್ವಹಿಸುತ್ತಿರುವ ಕಟ್ಟಡದ ಬಾಡಿಗೆಯನ್ನು ಲೋಕೋಪಯೋಗಿ ಇಲಾಖೆ ನಿಗದಿಪಡಿಸಿರುವಂತೆ 2655 ಚದರ ಅಡಿ ಕಾರ್ಪೆಟ್ ಏರಿಯಾಕ್ಕೆ 1-5-97 ರಿಂದ 31-3-2003ರವರೆಗೆ ರೂ.8/-ರಂತೆ ಹಾಗೂ ದಿನಾಂಕ:1-4-2003 ರಿಂದ ಒಂದು ಚದರ ಅಡಿ ಕಾರ್ಪೆಟ್ ಏರಿಯಾಗೆ ರೂ.12/-ರಂತೆ ಅಲ್ಲದೆ ಗಣಕೀಕರಣಕ್ಕಾಗಿ ಪಡೆದ ಹೆಚ್ಚುವರಿ ಸ್ಥಳ ಬಾಡಿಗೆ 3-8-2001 ರಿಂದ 31-3-2003ರವರೆಗೆ 482 ಚದರ ಅಡಿಗೆ ರೂ.9/-ರಂತೆ ಹಾಗೂ 1-4-2003 ರಿಂದ ಚದರ ಅಡಿಗೆ ಕಾರ್ಪೆಟ್ ಏರಿಯಾಗೆ ರೂ.12/-ರಂತೆ ಬಾಡಿಗೆ ಪರಿಷ್ಕರಣೆ ಮಾಡಲು ಶಿಫಾರಸ್ಸು ಮಾಡಿದ್ದಾರೆ.

ನೋಂದಣಿ ಮಹಾಪರಿವೀಕ್ಷಕರ ಮತ್ತು ಮುದ್ರಾಂಕಗಳ ಆಯುಕ್ತರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಮುನೋಸ 2003, ಬೆಂಗಳೂರು, ದಿನಾಂಕ: 8/9ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀರಾಂಪುರ ಉಪ ನೋಂದಣಿ ಕಛೇರಿ ಕಾರ್ಯನಿರ್ವಹಿಸುತ್ತಿರುವ ಶ್ರೀ ಜಿ. ವೆಂಕಟಯ್ಯ ಮಾಲೀಕತ್ವದ ವಿಜಯನಗರದಲ್ಲಿ ಇರುವ ಕಟ್ಟಡ ಸಂಖ್ಯೆ:1019/ಏ/1ನೇ ಮಹಡಿಯ 2655 ಚದರ ಅಡಿ ಕಟ್ಟಡಕ್ಕೆ ದಿನಾಂಕ:1-4-97 ರಿಂದ 12-8-2001ರವರೆಗೆ ಚದರ ಅಡಿಗೆ ರೂ.8/-ರಂತೆ ಹಾಗೂ ಗಣಕೀಕರಣಕ್ಕಾಗಿ ಪಡೆದ ಸ್ಥಳವನ್ನು ಸೇರಿಸಿ ದಿನಾಂಕ:13-8-2001 ರಿಂದ ಜಾರಿಗೆ ಬರುವಂತೆ ಒಟ್ಟು ವಿಸ್ತೀರ್ಣ 3240 ಚದರ ಅಡಿಗೆ ರೂ.8/- ರಂತೆ ಬಾಡಿಗೆಯನ್ನು ಪರಿಷ್ಕರಿಸಿ ನಿಗದಿಪಡಿಸಿ ಆದೇಶಿಸಿದೆ. ಇದಕ್ಕೆ ತಗಲುವ ಹಣವನ್ನು ಲೆಕ್ಕ ಶೀರ್ಷಿಕೆ 2030 ಮತ್ತು ಮುದ್ರಾಂಕ 03 ನೋಂದಣಿ 001 ನಿರ್ದೇಶನ ಮತ್ತು ಆಡಳಿತ 072 ಬಾಡಿಗೆ ಮತ್ತು ತೆರಿಗೆ ವೆಚ್ಚದ ಅಡಿಯಲ್ಲಿ ಭರಿಸಲು ಸೂಚಿಸಿದೆ.

ಈ ಆದೇಶವನ್ನು ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಎ 96, ದಿನಾಂಕ:10.7.96 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನಿಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 347

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

**ವಿಷಯ:** ಮೈಸೂರು ಉತ್ತರ ಉಪ ನೋಂದಣಿ ಕಛೇರಿಯಲ್ಲಿ ಸರ್ಕಾರಿ ಜಮೀನುಗಳಲ್ಲಿಯ ಅನಧಿಕೃತ ಕಟ್ಟಡಗಳನ್ನು ಕಾನೂನು ಬಾಹಿರವಾಗಿ ನೋಂದಣಿ ಮಾಡಿದ ಬಗ್ಗೆ ಜಂಟಿ ಇಲಾಖಾ ವಿಚಾರಣೆ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಕಂಇ 25 ಮುನೋಸೇ (2) 1999, ದಿನಾಂಕ:8-5-2002.
2. ಶ್ರೀ ಎಂ.ಜೆ. ಇಂದ್ರಕುಮಾರ್ (ನಿವೃತ್ತ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ) ವಿಚಾರಣಾಧಿಕಾರಿಗಳು ವರದಿ ಸಂಖ್ಯೆ:ದಿನಾಂಕ:4-11-2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಮೈಸೂರು ಉತ್ತರ ಉಪ ನೋಂದಣಿ ಕಛೇರಿಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಶ್ರೀ ಚಿಕ್ಕಕೆಂಪೇಗೌಡ, ಹಿರಿಯ ಉಪ ನೋಂದಣಾಧಿಕಾರಿ, ಶ್ರೀ ಕೆ.ಎಸ್. ಪಾಂಡುರಂಗಶೆಟ್ಟಿ, ಹಿರಿಯ ಉಪ ನೋಂದಣಾಧಿಕಾರಿ, ಶ್ರೀ ಕೆ.ಆರ್. ರೇಣುಕಾ ಪ್ರಸಾದ್, ಹಾಲಿ ಕೇಂದ್ರ ಸ್ಥಾನ ಸಹಾಯಕರು ಮತ್ತು ಶ್ರೀ ಬಿ.ಸಿ. ಮಂಜುನಾಥ್, ಹಿರಿಯ ಉಪ ನೋಂದಣಾಧಿಕಾರಿ ಇವರುಗಳು ಮೈಸೂರು ನಗರದ ಸುತ್ತ ಮುತ್ತಲಿನ ಗ್ರಾಮಗಳಲ್ಲಿ ಭೂ ಪರಿವರ್ತನೆಯಾಗದಿರುವ ನಿವೇಶನಗಳನ್ನು ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ.80 ಇಎಸ್‌ಎಮ್ 93(1), ದಿನಾಂಕ:14-2-94ನ್ನು ಉಲ್ಲಂಘಿಸಿ ದಾಖಲೆಗಳನ್ನು ನೋಂದಾಯಿಸಿ ಸರ್ಕಾರಕ್ಕೆ ಸುಮಾರು 63 ಕೋಟಿ ರೂ.ಗಳಷ್ಟು ರಾಜಸ್ವ ಹಾನಿ ಉಂಟು ಮಾಡಿದ್ದಾರೆ ಹಾಗೂ ನೋಂದಾಯಿಸಿರುವ ಕ್ರಯ ಪತ್ರಗಳಲ್ಲಿ ಗ್ರಾಮಠಾಣಾದಲ್ಲಿರುವ ನಿವೇಶನ ಎಂದು ನಮೂದಿಸಿ ಸರ್ವೆ ನಂಬರ್ ನೀಡಿ ಕ್ರಯ ಪತ್ರ ನೋಂದಾಯಿಸಲಾಗಿದೆ ಎನ್ನುವ ಆರೋಪಗಳ ಮೇಲೆ ಇಲಾಖಾ ವಿಚಾರಣೆ ನಡೆಸಲು ಶ್ರೀ ಎಂ.ಜೆ. ಇಂದ್ರಕುಮಾರ್ (ನಿವೃತ್ತ ರಿಜಿಸ್ಟ್ರಾರ್, ಕರ್ನಾಟಕ ಲೋಕಾಯುಕ್ತ) ಅವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಯಿತು. ವಿಚಾರಣಾಧಿಕಾರಿಗಳು ನಿಯಮಾನುಸಾರ ವಿಚಾರಣೆ ನಡೆಸಿ, ಮೇಲೆ ಓದಲಾದ (2)ರ ಪ್ರಕಾರ ದಿನಾಂಕ:10-11-2003ರಂದು ವಿಚಾರಣಾ ವರದಿಯನ್ನು ಒಪ್ಪಿಸುತ್ತಾ, ಆಪಾದಿತ ಅಧಿಕಾರಿಗಳ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿಲ್ಲವೆಂದು, ತಮ್ಮ ವಿಚಾರಣಾ ವರದಿಯಲ್ಲಿ ವರದಿ ಮಾಡಿರುತ್ತಾರೆ. ವಿಚಾರಣಾ ಅಧಿಕಾರಿಗಳ ವರದಿಯನ್ನು ಸರ್ಕಾರವು ಒಪ್ಪಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 25 ಮುನೋಸೇ (2) 99, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಸರ್ಕಾರವು ವಿಚಾರಣಾ ವರದಿಯನ್ನು ಪರಿಶೀಲಿಸಿ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀ ಚಿಕ್ಕಕೆಂಪೇಗೌಡ, ಹಿರಿಯ ಉಪ ನೋಂದಣಾಧಿಕಾರಿ, ಶ್ರೀ ಕೆ.ಎಸ್. ಪಾಂಡುರಂಗಶೆಟ್ಟಿ, ಹಿರಿಯ ಉಪನೋಂದಣಾಧಿಕಾರಿ, ಶ್ರೀ ಕೆ.ಆರ್. ರೇಣುಕಾ ಪ್ರಸಾದ್, ಹಾಲಿ ಕೇಂದ್ರ ಸ್ಥಾನ ಸಹಾಯಕರು ಮತ್ತು ಶ್ರೀ ಬಿ.ಸಿ. ಮಂಜುನಾಥ್, ಹಿರಿಯ ಉಪ ನೋಂದಣಾಧಿಕಾರಿ ಇವರುಗಳನ್ನು ಅವರ ಮೇಲೆ ಮಾಡಲಾದ ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 348

**ಎಸ್.ಜಿ. ನಾರಾಯಣ**

ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)

## ಕಾನೂನು ಸಚಿವಾಲಯ

**ವಿಷಯ:** ನ್ಯಾಯಾಲಯಗಳ ಕಾರ್ಯಾವಧಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 224 ಎಲ್‌ಎಸಿ 2002, ದಿನಾಂಕ:11-12-2002.
2. ಸರ್ಕಾರಿ ಆದೇಶ ಸಂಖ್ಯೆ: ಲಾ 229 ಎಲ್‌ಎಸಿ 2002, ದಿನಾಂಕ:07-11-2002.
3. ಸರ್ಕಾರಿ ಆದೇಶ ಸಂಖ್ಯೆ: ಲಾ 205 ಎಲ್‌ಎಸಿ 2002, ದಿನಾಂಕ:26-11-2002.
4. ಸರ್ಕಾರಿ ಆದೇಶ ಸಂಖ್ಯೆ: ಲಾ 210 ಎಲ್‌ಎಸಿ 2001, ದಿನಾಂಕ:14-09-2001.
5. ಸರ್ಕಾರಿ ಆದೇಶ ಸಂಖ್ಯೆ: ಲಾ 211 ಎಲ್‌ಎಸಿ 2001, ದಿನಾಂಕ:06-11-2001.
6. ಸರ್ಕಾರಿ ಆದೇಶ ಸಂಖ್ಯೆ: ಲಾ 225 ಎಲ್‌ಎಸಿ 2001, ದಿನಾಂಕ:28-09-2001.
7. ಸರ್ಕಾರಿ ಆದೇಶ ಸಂಖ್ಯೆ: ಲಾ 193 ಎಲ್‌ಎಸಿ 2001, ದಿನಾಂಕ:03-09-2001.
8. ಸರ್ಕಾರಿ ಆದೇಶ ಸಂಖ್ಯೆ: ಲಾ 198 ಎಲ್‌ಎಸಿ 2001, ದಿನಾಂಕ:25-09-2001.
9. ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರ ಪತ್ರ ಸಂಖ್ಯೆ: ಜಿಒಬಿ 2:245 (10) 2003, ದಿನಾಂಕ:10-10-2003.
10. ಪತ್ರ ಸಂಖ್ಯೆ: ಜಿಒಬಿ 2:245 (5) 2003, ದಿನಾಂಕ:3-10-2003.
11. ಪತ್ರ ಸಂಖ್ಯೆ: ಜಿಒಬಿ 2:245 (11) 2003, ದಿನಾಂಕ:7-10-2003.
12. ಪತ್ರ ಸಂಖ್ಯೆ: ಜಿಒಬಿ 2:245 (7) 2003, ದಿನಾಂಕ:9-10-2003.
13. ಪತ್ರ ಸಂಖ್ಯೆ: ಜಿಒಬಿ 2:245 (8) 2003, ದಿನಾಂಕ:13-10-2003.
14. ಪತ್ರ ಸಂಖ್ಯೆ: ಜಿಒಬಿ 2:245 (9) 2003, ದಿನಾಂಕ:8-10-2003.
15. ಪತ್ರ ಸಂಖ್ಯೆ: ಜಿಒಬಿ 2:245 (2) 2003, ದಿನಾಂಕ:7-10-2003.
16. ಪತ್ರ ಸಂಖ್ಯೆ: ಜಿಒಬಿ 2:245 (1) 2003, ದಿನಾಂಕ:1-10-2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: 1 ರಿಂದ 8ರ ಸರ್ಕಾರಿ ಆದೇಶಗಳಲ್ಲಿ ಕ್ರಮವಾಗಿ ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯು ಅವುಗಳ ಮುಂದೆ ಸೂಚಿಸಲಾದ ದಿನಾಂಕದಂದು ಪೂರ್ಣಗೊಳ್ಳುವುದರಿಂದ, ಮತ್ತು ಸದರಿ ನ್ಯಾಯಾಲಯಗಳಲ್ಲಿ ಬಹಳಷ್ಟು ಪ್ರಕರಣಗಳು ಬಾಕಿ ಇರುವುದರಿಂದ, ಅವುಗಳಿಗೆ ಮಂಜೂರಾದ ಪ್ರಿಸೈಡಿಂಗ್ ಅಧಿಕಾರಿ ಮತ್ತು ಪೂರಕ ಸಿಬ್ಬಂದಿಗಳ ಸಮೇತ ಮೇಲೆ ಓದಲಾದ ಕ್ರಮ ಸಂಖ್ಯೆ 9ರ ಪತ್ರದಲ್ಲಿ ಹಾವೇರಿಯ ಜಿಲ್ಲಾ ಮತ್ತು ಸತ್ರ ನ್ಯಾಯಾಲಯದ ಕಾರ್ಯಾವಧಿಯನ್ನು ಖಾಯಂಗೊಳಿಸಲು ಮತ್ತು ಉಳಿದ ನ್ಯಾಯಾಲಯಗಳ ಕಾರ್ಯಾವಧಿಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ: 10 ರಿಂದ 16ರಲ್ಲಿನ ಪತ್ರಗಳಲ್ಲಿ ಎರಡು ವರ್ಷಗಳ ಅವಧಿಗೆ ಮುಂದುವರೆಸಲು ಕರ್ನಾಟಕ ಉಚ್ಚ ನ್ಯಾಯಾಲಯದ ಅಸಿಸ್ಟೆಂಟ್ ರಿಜಿಸ್ಟ್ರಾರ್‌ರವರು ಕೋರಿರುತ್ತಾರೆ.

| | ನ್ಯಾಯಾಲಯದ ಹೆಸರು | ಕಾರ್ಯಾವಧಿ ಪೂರ್ಣಗೊಂಡ ದಿನಾಂಕ | ಮುಂದುವರೆಸಬೇಕಾದ ದಿನಾಂಕ |
|---|---|---|---|
| 1. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ. | 01-12-2003 | 02-12-2003 |
| 2. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉಡುಪಿ. | 23-11-2003 | 24-11-2003 |
| 3. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ. | 01-12-2003 | 02-12-2003 |
| 4. | ಸಿವಿಲ್ ನ್ಯಾಯಾಧೀಶರು (ಹಿ.ವಿ) ಕಡೂರು | 19-12-2003 | 20-12-2003 |
| 5. | ಸಿವಿಲ್ ನ್ಯಾಯಾಧೀಶರು (ಹಿ.ವಿ) ಕುಣಿಗಲ್ | 19-12-2003 | 20-12-2003 |
| 6. | ಸಿವಿಲ್ ನ್ಯಾಯಾಧೀಶರು (ಹಿ.ವಿ) ಗಂಗಾವತಿ | 19-12-2003 | 20-12-2003 |
| 7. | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ), ದಾವಣಗೆರೆ | 07-11-2003 | 08-11-2003 |
| 8. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ) ಹಾಸನ | 07-11-2003 | 08-11-2003 |

ಪ್ರಸ್ತಾವನೆಯನ್ನು ಪರಿಶೀಲಿಸಿ ಹಾವೇರಿ, ಗದಗ, ಉಡುಪಿ ಕೊಪ್ಪಳ ಜಿಲ್ಲಾ ಮತ್ತು ಸತ್ರ ನ್ಯಾಯಾಲಯವನ್ನು ಖಾಯಂಗೊಳಿಸುವ ವಿಚಾರದಲ್ಲಿ ಪೂರ್ಣ ಮಾಹಿತಿಯು ಲಭ್ಯವಿಲ್ಲದಿರುವುದರಿಂದ ಈ ನ್ಯಾಯಾಲಯಗಳನ್ನು ಮತ್ತು ಇತರೆ ನ್ಯಾಯಾಲಯಗಳನ್ನು ಎರಡು ವರ್ಷಗಳ ಅವಧಿಗೆ ಮುಂದುವರಿಸಲು ತೀರ್ಮಾನಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಲಾ 190 ಎಲ್‌ಎಸಿ 2003, ಬೆಂಗಳೂರು, ದಿನಾಂಕ: 24ನೇ ನವೆಂಬರ್ 2003**

ಈ ಕೆಳಕಂಡ ನ್ಯಾಯಾಲಯಗಳ ಕಾರ್ಯಾವಧಿಯನ್ನು ಪ್ರಿಸೈಡಿಂಗ್ ಅಧಿಕಾರಿ ಮತ್ತು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಅವುಗಳ ಮುಂದೆ ಸೂಚಿಸಲಾದ ದಿನಾಂಕದಿಂದ ಎರಡು ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲು ಮಂಜೂರಾತಿ ನೀಡಿದೆ.

| | ನ್ಯಾಯಾಲಯದ ಹೆಸರು | ಹುದ್ದೆಗಳ ಸಂಖ್ಯೆ | ಈ ಕೆಳಕಂಡ ದಿನಾಂಕದಿಂದ ಮುಂದುವರೆಸಿದೆ |
|---|---|---|---|
| 1. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹಾವೇರಿ. | 45 | 02-12-2003 |
| 2. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಉಡುಪಿ. | 57 | 24-11-2003 |
| 3. | ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟೆ. | 38 | 02-12-2003 |
| 4. | ಸಿವಿಲ್ ನ್ಯಾಯಾಧೀಶರು (ಹಿ.ವಿ) ಕಡೂರು | 43 | 20-12-2003 |
| 5. | ಸಿವಿಲ್ ನ್ಯಾಯಾಧೀಶರು (ಹಿ.ವಿ) ಕುಣಿಗಲ್ | 43 | 20-12-2003 |
| 6. | ಸಿವಿಲ್ ನ್ಯಾಯಾಧೀಶರು (ಹಿ.ವಿ) ಗಂಗಾವತಿ | 43 | 20-12-2003 |
| 7. | 2ನೇ ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ), ದಾವಣಗೆರೆ | 07 | 08-11-2003 |
| 8. | ಹೆಚ್ಚುವರಿ ಸಿವಿಲ್ ನ್ಯಾಯಾಧೀಶರು (ಹಿ.ವಿ) ಹಾಸನ | 07 | 08-11-2003 |

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "201-00-105-0-01 ಯೋಜನೇತರ" ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ:10-7-1996ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿಸಲಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 351

**ಎ.ಪಿ. ರಾಮಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ), ಕಾನೂನು ಇಲಾಖೆ (ಆಡಳಿತ-1)

## ನಗರಾಭಿವೃದ್ಧಿ ಸಚಿವಾಲಯ

**ವಿಷಯ:** ಮುಂಬೈ ಅಹಮದಾಬಾದ್, ಪೂನಾ ಮತ್ತು ಹೈದರಾಬಾದ್ ನಗರಗಳಿಗೆ ಟ್ರಾನ್ಸ್‌ಫರ್ ಆಫ್ ಡೆವಲಪ್‌ಮೆಂಟ್ ರೈಟ್ಸ್ ಬಗ್ಗೆ ಅಧ್ಯಯನಕ್ಕಾಗಿ ಪ್ರವಾಸ ಕೈಗೊಳ್ಳುವ ಬಗ್ಗೆ.

**ಓದಲಾಗಿದೆ:** ಕಡತ ಸಂಖ್ಯೆ ನಯೋ ಉನಿ(ವಿವಿ) ಅಧ್ಯಯನ ಪ್ರವಾಸ - 04 ದಿನಾಂಕ 19-2-2004 ನಿರ್ದೇಶಕರು, ನಗರ ಯೋಜನಾ ಇಲಾಖೆ ಇವರಿಂದ.

**ಪ್ರಸ್ತಾವನೆ:**

ಮೇಲೆ ಓದಲಾದ ಕಡತದಲ್ಲಿ ನೆರೆ ರಾಜ್ಯದ ಪ್ರಮುಖ ಪಟ್ಟಣಗಳಾದ ಅಹಮದಾಬಾದ್, ಮುಂಬೈ, ಪೂನಾ ಮತ್ತು ಹೈದರಾಬಾದ್ ನಗರಗಳಲ್ಲಿನ 'ಟ್ರಾನ್ಸ್‌ಫರ್ ಆಫ್ ಡೆವಲಪ್‌ಮೆಂಟ್ ರೈಟ್ಸ್' ನ್ನು ಜಾರಿಗೊಳಿಸುವ ಪದ್ಧತಿಯನ್ನು ಸಮಗ್ರ ಅಧ್ಯಯನ

ಮಾಡಿ ಪ್ರತ್ಯಕ್ಷ ಮಾಹಿತಿ ಪಡೆದು ವರದಿ ಸಲ್ಲಿಸುವ ಸಲುವಾಗಿ ಅಧಿಕಾರಿಗಳ ತಂಡವನ್ನು ದಿನಾಂಕ 8-3-2004 ರಿಂದ 12-3-2004ರ ವರೆಗೆ ಮುಂಬೈ ಮತ್ತು ಅಹಮದಾಬಾದ್ ನಗರಗಳಿಗೂ ದಿನಾಂಕ 23-3-2004 ರಿಂದ 27-3-2004ರ ವರೆಗೆ ಪೂನಾ ಮತ್ತು ಹೈದರಾಬಾದ್ ನಗರಗಳಿಗೂ ವಿಮಾನದಲ್ಲಿ ಭೇಟಿ ನೀಡಲು ಸೂಕ್ತ ಆದೇಶವನ್ನು ನೀಡುವಂತೆ ಕೋರಿದ್ದಾರೆ.

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ ನಅಇ 42 ನಯೋಸೇ 2004, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2004**

ಶ್ರೀ ವಿ.ಎಂ. ಹೆಗಡೆ, ನಗರ ಯೋಜನಾ ನಿರ್ದೇಶಕರು, ಕೇಂದ್ರ ಕಛೇರಿ, ಬೆಂಗಳೂರು ಮತ್ತು ಶ್ರೀ ಎಸ್.ಎಸ್. ಟೋಪಗಿ, ನಗರ ಯೋಜನಾ ಜಂಟಿ ನಿರ್ದೇಶಕರು, ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು ಇವರನ್ನು 'ಟ್ರಾನ್ಸ್‌ಫರ್ ಆಫ್ ಡೆವಲಪ್‌ಮೆಂಟ್ ರೈಟ್ಸ್' ಬಗ್ಗೆ ಅಧ್ಯಯನಕ್ಕಾಗಿ ದಿನಾಂಕ 23-3-2004 ರಿಂದ 27-3-2004ರ ವರೆಗೆ ಪೂನಾ ಮತ್ತು ಹೈದರಾಬಾದ್ ನಗರಗಳಿಗೂ, ದಿನಾಂಕ 5-4-2004 ರಿಂದ 8-4-2004ರ ವರೆಗೆ ಮುಂಬೈ ಮತ್ತು ಅಹಮದಾಬಾದ್ ನಗರಗಳಿಗೆ ವಿಮಾನದಲ್ಲಿ ಪ್ರಯಾಣಿಸಲು ಅನುಮತಿ ನೀಡಿದೆ ಹಾಗೂ ಈ ಸಂಬಂಧ ಕೂಡಲೇ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಆದೇಶಿಸಿದೆ.

ಇದಕ್ಕೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2217- **ನಗರಾಭಿವೃದ್ಧಿ** ಯಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 352 **ಟಿ. ರಂಗನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ, ನಗರಾಭಿವೃದ್ಧಿ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಕೆ. ಉದಯ, ಸರ್ಕಾರದ ಮುಖ್ಯ ವಾಸ್ತು ಶಿಲ್ಪಿ ಇವರ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಾಗಿರುವ ಪ್ರತಿಕೂಲ ಷರಾದ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಮುಖ್ಯ ಕಾರ್ಯದರ್ಶಿಯವರ ಅ.ಸ. ಪತ್ರ ಸಂಖ್ಯೆ ಮುಕಾ 63 ವಾಕಾನಿವ:02, ದಿನಾಂಕ: 19-11-2003.
2. ಶ್ರೀ ಕೆ. ಉದಯ, ಸರ್ಕಾರದ ಮುಖ್ಯ ವಾಸ್ತು ಶಿಲ್ಪಿ ಇವರ ಪತ್ರ ಸಂಖ್ಯೆ: ಸಿಎ:2730:2003-04, ದಿನಾಂಕ: 24-01-2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ 1ರಲ್ಲಿ ಓದಲಾದ ಅರೆಸರ್ಕಾರಿ ಪತ್ರದಲ್ಲಿ ಶ್ರೀ ಕೆ. ಉದಯ, ಸರ್ಕಾರದ ಮುಖ್ಯ ವಾಸ್ತು ಶಿಲ್ಪಿ, ಬೆಂಗಳೂರು ಇವರ 2002-03ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಈ ಕೆಳಕಂಡ ಪ್ರತಿಕೂಲ ಷರಾವನ್ನು ಅಧಿಕಾರಿಗೆ ತಿಳಿಸಲಾಗಿದೆ.

"He could not show leadership quality to motivate his people to work on commercial basis even though A.R. commission had advised to close down this Department".

ಮೇಲೆ ಓದಲಾದ ಕ್ರಮ ಸಂಖ್ಯೆ:2ರಲ್ಲಿನ ಪತ್ರದಲ್ಲಿ ಅಧಿಕಾರಿಯು ತಮ್ಮ ಕಾರ್ಯನಿರ್ವಹಣೆಯ ಬಗ್ಗೆ ದೀರ್ಘವಾದ ವಿವರಣೆ ನೀಡಿ ತಮ್ಮ 2002-03ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾವನ್ನು ಹಿಂದಕ್ಕೆ ಪಡೆಯಲು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಸೇಇಮು 2004, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿಗಳು) ನಿಯಮಾವಳಿಗಳು 2000 ನಿಯಮ 10(2)ರನ್ವಯ ಶ್ರೀ ಕೆ. ಉದಯ, ಸರ್ಕಾರದ ಮುಖ್ಯ ವಾಸ್ತು ಶಿಲ್ಪಿ, ಬೆಂಗಳೂರು ಇವರ 2002-03ನೇ ಸಾಲಿನ ಕಾರ್ಯನಿರ್ವಹಣಾ ವರದಿಯಲ್ಲಿ ದಾಖಲಾಗಿರುವ ಪ್ರತಿಕೂಲ ಷರಾವನ್ನು ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 353 **ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇ-ಡಿ)

## ಗ್ರಂಥಾಲಯ ಸಚಿವಾಲಯ

**ವಿಷಯ:** ಸಚಿವಾಲಯ ಗ್ರಂಥಾಲಯಕ್ಕೆ 2004-2005ರ ಅವಧಿಗೆ ದಿನಪತ್ರಿಕೆ/ನಿಯತಕಾಲಿಕೆಗಳನ್ನು ತರಿಸಿಕೊಳ್ಳುವ ಬಗ್ಗೆ.

**ಓದಲಾಗಿದೆ:** 1. ಟೆಂಡರ್ ಪ್ರಕಟಣೆ ಸಂಖ್ಯೆ. ಸಿಆಸುಇ 01 ಸಗ್ರನಿ 2004 ದಿನಾಂಕ: 27-1-2004.

**ಪ್ರಸ್ತಾವನೆ:**

ಓದಲಾಗಿರುವ ಟೆಂಡರ್ ಪ್ರಕಟಣೆಯನ್ನು ದಿನಾಂಕ:2-2-2004 ರ ಹೊಸದಿಗಂತ ಮತ್ತು ಈ ಸಂಜೆ ಹಾಗೂ ದಿನಾಂಕ:17-2-2004 ರ ಡೆಕ್ಕನ್ ಹೆರಾಲ್ಡ್ ಮತ್ತು ಟೈಮ್ಸ್ ಆಫ್ ಇಂಡಿಯಾ ಈ ದಿನಪತ್ರಿಕೆಗಳಲ್ಲಿ ಪ್ರಕಟಿಸಿ ದಿನಪತ್ರಿಕೆ/ನಿಯತಕಾಲಿಕೆಗಳ ಸರಬರಾಜುದಾರರಿಂದ ಸಚಿವಾಲಯ ಗ್ರಂಥಾಲಯಕ್ಕೆ 2004-2005ನೇ ಅವಧಿಗೆ ದಿನಪತ್ರಿಕೆ/ನಿಯತಕಾಲಿಕೆಗಳನ್ನು ಸರಬರಾಜು ಮಾಡಲು ಟೆಂಡರ್‌ಗಳನ್ನು ಆಹ್ವಾನಿಸಲಾಗಿತ್ತು. ಈ ಟೆಂಡರ್ ಪ್ರಕಟಣೆಗೆ ಕೇವಲ ಟೆಂಡರ್‌ನ್ನು M/s. Guru News Agency, No.1-11, A Cross, Pipeline, Malleshwaram, Bangalore-03 ಇವರು ತಮ್ಮ ಟೆಂಡರ್‌ನ್ನು ಸಲ್ಲಿಸುತ್ತಾ ಸರ್ಕಾರಕ್ಕೆ ಶೇಕಡ 2% ರಿಯಾಯ್ತಿಯನ್ನು ನೀಡಲು ಮತ್ತು ರೂಪಾಯಿಗಳು ಅರವತ್ತು ಸಾವಿರದ ಮೊತ್ತದ ಹಣವನ್ನು ಬ್ಯಾಂಕ್ ಗ್ಯಾರಂಟಿಯಾಗಿ ನೀಡಲು

ಒಪ್ಪಿರುತ್ತಾರೆ. ಟೆಂಡರ್ ಪ್ರಕಟಣೆಗೆ ಇವರೊಬ್ಬರೇ ಅರ್ಜಿಯನ್ನು ಸಲ್ಲಿಸಿರುವುದರಿಂದ ಇವರನ್ನು ಯಶಸ್ವಿ ಟೆಂಡರ್ದಾರರೆಂದು ಸರ್ಕಾರ ಪರಿಗಣಿಸಿದೆ ಮತ್ತು ದಿನಾಂಕ 1-4-2004 ರಿಂದ 31-3-2005 ರ ಅವಧಿಗೆ ಸಚಿವಾಲಯ ಗ್ರಂಥಾಲಯಕ್ಕೆ ಈ ಆದೇಶಕ್ಕೆ ಲಗತ್ತಿಸಲಾದ ತಃಖ್ತೆಯಲ್ಲಿ ನಮೂದಿಸಲಾದ ದಿನಪತ್ರಿಕೆ/ನಿಯತಕಾಲಿಕೆಗಳನ್ನು ಸರಬರಾಜು ಮಾಡಲು ಅನುಮತಿಯನ್ನು ನೀಡಿ ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 01 ಸಗ್ರನಿ 2004, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2004**

ಸಚಿವಾಲಯ ಗ್ರಂಥಾಲಯಕ್ಕೆ ದಿನಾಂಕ: 1-4-2004 ರಿಂದ 31-3-2005ರ ಅವಧಿಗೆ ಸರಬರಾಜುದಾರರಾದ M/s. Guru News Agency, No.1-11, A Cross, Pipeline, Malleshwaram, Bangalore-03 ರವರಿಗೆ ಈ ಕೆಳಕಂಡ ಷರತ್ತುಗಳೊಂದಿಗೆ ಮುಂಗಡವಾಗಿ ಹಣ ಪಾವತಿ ಮಾಡಿ ಇದಕ್ಕೆ ಲಗತ್ತಿಸಲಾಗಿರುವ ತಃಖ್ತೆಯಲ್ಲಿ ನಮೂದಿಸಿದಂತೆ ದಿನಪತ್ರಿಕೆ/ನಿಯತಕಾಲಿಕೆಗಳನ್ನು ತರಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

1. ಪ್ರತಿ ಮೂರು ತಿಂಗಳಿಗೊಮ್ಮೆ ಮುಂಗಡ ಹಣವನ್ನು ಕ್ಲೈಮ್ ಮಾಡುವುದು.
2. ಸರಬರಾಜುದಾರರು ದಿನಪತ್ರಿಕೆ/ನಿಯತಕಾಲಿಕೆಗಳ ಮುಖ ಬೆಲೆಯ ಶೇಕಡ 2% ರಿಯಾಯ್ತಿನ್ನು ಸರ್ಕಾರಕ್ಕೆ ಬಿಟ್ಟು ಕೊಡುವುದು.
3. ಸರಬರಾಜುದಾರರು ಸಲ್ಲಿಸುವ ಬಿಲ್ಲಿನಲ್ಲಿ ನಮೂದಿಸಿದ ಎಲ್ಲಾ ದಿನಪತ್ರಿಕೆ/ನಿಯತಕಾಲಿಕೆಗಳನ್ನು ಅವರು ತಪ್ಪದೇ ಸರಬರಾಜು ಮಾಡುವುದು, ತಪ್ಪಿದಲ್ಲಿ ಮುಂದಿನ ಬಿಲ್‌ನಲ್ಲಿ ಅದರ ಮೊತ್ತವನ್ನು ಕಟಾಯಿಸಲಾಗುವುದು.
4. ರೂಪಾಯಿ ಅರವತ್ತು ಸಾವಿರದ ಬ್ಯಾಂಕ್ ಗ್ಯಾರಂಟಿಯನ್ನು ನೀಡುವುದು.

ಇದಕ್ಕೆ ತಗಲುವ ವೆಚ್ಚವನ್ನು ಸಚಿವಾಲಯದ ಲೆಕ್ಕ ಶೀರ್ಷಿಕೆ 2052-00-090-0-01-051 ಸಾಮಾನ್ಯ ವೆಚ್ಚಗಳು ರ ಅಡಿಯಲ್ಲಿ ಭರಿಸಬಹುದಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ FD 1 TFP 96 ದಿನಾಂಕ 10-7-96ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡೇನಿಯಲ್ ಬರೆಟ್ಟೊ**
ಮುಖ್ಯ ಗ್ರಂಥಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಸಚಿವಾಲಯ ಗ್ರಂಥಾಲಯ.

**ದಿನಾಂಕ:1-4-2004 ರಿಂದ 31-3-2005 ರ ಅವಧಿಯಲ್ಲಿ ಸಚಿವಾಲಯ ಗ್ರಂಥಾಲಯಕ್ಕೆ ಸರಬರಾಜು ಮಾಡಬೇಕಾಗಿರುವ ನಿಯತಕಾಲಿಕೆಗಳ/ದಿನಪತ್ರಿಕೆಗಳ ಪಟ್ಟಿ ತಃಖ್ತೆ:1**

| ಕ್ರ. ಸಂ. | ನಿಯತಕಾಲಿಕೆಗಳ ಹೆಸರು | ಪ್ರತಿಗಳ ಸಂಖ್ಯೆ | ಕ್ರ. ಸಂ. | ನಿಯತಕಾಲಿಕೆಗಳ ಹೆಸರು | ಪ್ರತಿಗಳ ಸಂಖ್ಯೆ |
|---|---|---|---|---|---|
| 1 | Ad Mag | 2 | 2 | Alive | 4 |
| 3 | ಅರಗಿಣಿ | 4 | 4 | Astrological mag | 3 |
| 5 | Auto India | 2 | 6 | ಬಾಲಮಂಗಳ | 4 |
| 7 | ಬಾಲಮಿತ್ರ | 4 | 8 | Better Photography | 2 |
| 9 | Business India | 2 | 10 | Business Today | 2 |
| 11 | Business World | 2 | 12 | Capital Market | 2 |
| 13 | ಚಂಪಕ | 2 | 14 | Champaka (E) | 4 |
| 15 | ಚಂದಮಾಮ | 4 | 16 | Chandamama (E) | 4 |
| 17 | ಚುಟುಕ | 4 | 18 | Cine Blitz | 4 |
| 19 | CSR | 4 | 20 | Computer @ Home | 2 |
| 21 | Dalal Street | 2 | 22 | Data Quest | 2 |
| 23 | Design and Interior | 2 | 24 | ದಿಕ್ಸೂಚಿ | 4 |
| 25 | Economic & Political Weekly | 4 | 26 | Electronics for You | 2 |
| 27 | Employment News | 4 | 28 | Express Computer | 2 |
| 29 | Femina | 4 | 30 | Filmfare | 4 |
| 31 | Frontline | 6 | 32 | ಗೃಹಶೋಭ | 8 |
| 33 | Health & Nutrition | 4 | 34 | ಹಾಯ್ ಬೆಂಗಳೂರು | 6 |
| 35 | ಹೊಸತು | 4 | 36 | India Today | 6 |
| 37 | India Today Plus | 2 | 38 | Inside Outside | 2 |

| ಕ್ರ. ಸಂ. | ನಿಯತಕಾಲಿಕೆಗಳ ಹೆಸರು | ಪ್ರತಿಗಳ ಸಂಖ್ಯೆ | ಕ್ರ. ಸಂ. | ನಿಯತಕಾಲಿಕೆಗಳ ಹೆಸರು | ಪ್ರತಿಗಳ ಸಂಖ್ಯೆ |
|---|---|---|---|---|---|
| 39 | ಜೀವನಾಡಿ | 4 | 40 | ಕರ್ಮವೀರ | 8 |
| 41 | ಕಸ್ತೂರಿ | 6 | 42 | ಲಂಕೇಶ ಪತ್ರಿಕೆ | 8 |
| 43 | ಮಲ್ಲಿಗೆ | 4 | 44 | ಮಂಗಳ | 4 |
| 45 | ಮಯೂರ | 8 | 46 | My doctor | 2 |
| 47 | Outlook | 6 | 48 | PC Quest | 2 |
| 49 | ಪ್ರಿಯಾಂಕ | 2 | 50 | ರಾಗಸಂಗಮ | 6 |
| 51 | Reader Digest | 4 | 52 | ರೂಪತಾರ | 6 |
| 53 | ಸರ್ಕಾರಿ ನೌಕರರ ಮಿತ್ರ | 2 | 54 | Savvy | 4 |
| 55 | Screen | 4 | 56 | Society | 4 |
| 57 | Sports Star | 6 | 58 | Star Dust | 4 |
| 59 | Star Teller | 2 | 60 | ಸುಧಾ | 8 |
| 61 | ತರಂಗ | 8 | 62 | The Week | 6 |
| 63 | Time | 4 | 64 | Twinkle Digest | 4 |
| 65 | ತುಂತುರು | 4 | 66 | ತುಷಾರ | 6 |
| 67 | Wisdom | 4 | 68 | Women's era | 6 |
| 69 | Sarita (Hindi) | 1 | 70 | Navneet (Hindi) | 1 |
| 71 | Manohar Kahaniya (Hindi) | 1 | 72 | Gruhashobha (Hindi) | 1 |

**ತಃಖ್ತೆ 2**

**ದಿನಪತ್ರಿಕೆಗಳ ವಿವರ**

| ಕ್ರ. ಸಂ. | ದಿನಪತ್ರಿಕೆ ಹೆಸರು | ಪ್ರತಿಗಳ ಸಂಖ್ಯೆ | ಕ್ರ. ಸಂ. | ದಿನಪತ್ರಿಕೆ ಹೆಸರು | ಪ್ರತಿಗಳ ಸಂಖ್ಯೆ |
|---|---|---|---|---|---|
| 1 | ಕನ್ನಡ ಪ್ರಭ | 8 | 2 | ಉದಯವಾಣಿ | 6 |
| 3 | ಜನವಾಹಿನಿ | 6 | 4 | New Indian Express | 6 |
| 5 | Times of India | 6 | 6 | Economic Times | 4 |
| 7 | Financial Express | 4 | 8 | ವಿಜಯ ಕರ್ನಾಟಕ | 4 |
| 9 | ಪ್ರಜಾವಾಣಿ | 8 | 10 | ಸಂಯುಕ್ತ ಕರ್ನಾಟಕ | 8 |
| 11 | Asian Age | 4 | 12 | Deccan Herald | 6 |
| 13 | Hindu | 6 | 14 | Business Line | 3 |
| 15 | Business Standard | 4 | | | |

**ಡೇನಿಯಲ್ ಬರೆಟ್ಟೊ**

ಪಿ.ಆರ್. 354

ಮುಖ್ಯ ಗ್ರಂಥಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ ಸಚಿವಾಲಯ ಗ್ರಂಥಾಲಯ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ, ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ : ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವೆ ಹಾಗೂ ಕಂದಾಯ : ಒಳಾಡಳಿತ ಮತ್ತು ಸಾರಿಗೆ : ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳಲ್ಲಿನ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 4 ಸಸಿವಿ 92, ದಿನಾಂಕ: 13.8.1992.
2. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 275 ಸಅಸೇ 93, ದಿನಾಂಕ: 27.9.1993.
3. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 370 ಸಅಸೇ 95 (2) ದಿನಾಂಕ: 9.11.2000.
4. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 370 ಸಅಸೇ 95 (2) ದಿನಾಂಕ: 6.12.2000.
5. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 19 ಸಸಿವಿ 2001 (2) ದಿನಾಂಕ: 25.5.2001.
6. ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 27 ಸಸಿವಿ 2002 ದಿನಾಂಕ: 21.5.2002.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಕೆಳಕಂಡ ಇಲಾಖೆಗಳಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆಗಳನ್ನು 2 ವರ್ಷಗಳ ಅವಧಿಗೆ ಮಂಜೂರು ಮಾಡಲಾಗಿರುತ್ತದೆ.

1. ಪಶುಸಂಗೋಪನೆ ಮೀನುಗಾರಿಕೆ ಮತ್ತು ಅರಣ್ಯ ಇಲಾಖೆ.
2. ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಹಾಗೂ ಕಂದಾಯ ಇಲಾಖೆ.
3. ಆಹಾರ ಮತ್ತು ಸಾರಿಗೆ ಹಾಗೂ ಸಹಕಾರ ಇಲಾಖೆ.
4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಹಾಗೂ ಮೇಲ್ಕಂಡ ಇಲಾಖೆಗಳ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆಗಳಿಗೆ ಈ ಕೆಳಕಂಡಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡಲಾಗಿರುತ್ತದೆ.

| ಕ್ರ. ಸಂ. | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಆಂತರಿಕ ಆರ್ಥಿಕ ಸಲಹೆಗಾರರು | 1 | 4 |
| | **ಆಂತರಿಕ ಆರ್ಥಿಕ ಶಾಖೆ:** | | |
| 2. | ಶಾಖಾಧಿಕಾರಿ | 1 | 4 |
| 3. | ಹಿರಿಯ ಸಹಾಯಕ | 1 | 4 |
| 4. | ಸಹಾಯಕ | 2 | 8 |
| 5. | ಶೀಘ್ರಲಿಪಿಗಾರ | 1 | 4 |
| 6. | ಬೆರಳಚ್ಚುಗಾರ | 1 | 4 |
| 7. | ಕಿರಿಯ ಸಹಾಯಕ | 1 | 4 |
| 8. | ದಲಾಯತ್ | 1 | 4 |
| | **ಆಯವ್ಯಯ ಮತ್ತು ಲೆಕ್ಕಪತ್ರ ಶಾಖೆ:** | | |
| 9. | ಶಾಖಾಧಿಕಾರಿ | 1 | 4 |
| 10. | ಹಿರಿಯ ಸಹಾಯಕ | 2 | 8 |
| 11. | ಸಹಾಯಕ | 1 | 4 |
| 12. | ಕಿರಿಯ ಸಹಾಯಕ | 1 | 4 |
| 13. | ಬೆರಳಚ್ಚುಗಾರ | 1 | 4 |
| 14. | ದಲಾಯತ್ | 1 | 4 |
| | **ಒಟ್ಟು** | **16** | **64** |

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪಶುಸಂಗೋಪನೆ ಮೀನುಗಾರಿಕೆ ಮತ್ತು ಅರಣ್ಯ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನು ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆಗೆ ಹಾಗೂ ಆಹಾರ, ಸಾರಿಗೆ, ಸಹಕಾರ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನು ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆ ಎಂದು ಮರುಪದನಾಮೀಕರಿಸಲಾಗಿರುತ್ತದೆ.

ನಂತರ ಕ್ರಮ ಸಂಖ್ಯೆ (3) ರಿಂದ (6) ರವರೆಗೆ ಓದಲಾಗಿರುವ ಸರ್ಕಾರಿ ಆದೇಶಗಳನ್ವಯ ಈ ಹುದ್ದೆಗಳನ್ನು ದಿನಾಂಕ: 31.3.2003 ರವರೆಗೆ ಮುಂದುವರೆಸಲಾಗಿರುತ್ತದೆ. ಪ್ರಸ್ತುತ ಈ ಹುದ್ದೆಗಳನ್ನು ದಿನಾಂಕ: 1.4.2003 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 41 ಸಸಿವಿ 2003, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಈ ಕೆಳಕಂಡ ಇಲಾಖೆಗಳ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಗಳನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2003 ರಿಂದ 31.12.2004 ರವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

1. ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ.
2. ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಹಾಗೂ ಕಂದಾಯ ಇಲಾಖೆ.
3. ಒಳಾಡಳಿತ ಮತ್ತು ಸಾರಿಗೆ ಇಲಾಖೆ.
4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

| ಕ್ರ. ಸಂ. | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಆಂತರಿಕ ಆರ್ಥಿಕ ಸಲಹೆಗಾರರು | 1 | 4 |

| ಕ್ರ. ಸಂ. | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| | **ಆಂತರಿಕ ಆರ್ಥಿಕ ಶಾಖೆ:** | | |
| 2. | ಶಾಖಾಧಿಕಾರಿ | 1 | 4 |
| 3. | ಹಿರಿಯ ಸಹಾಯಕ | 1 | 4 |
| 4. | ಸಹಾಯಕ | 2 | 8 |
| 5. | ಶೀಘ್ರಲಿಪಿಗಾರ | 1 | 4 |
| 6. | ಬೆರಳಚ್ಚುಗಾರ | 1 | 4 |
| 7. | ಕಿರಿಯ ಸಹಾಯಕ | 1 | 4 |
| 8. | ದಲಾಯತ್ | 1 | 4 |
| | **ಆಯವ್ಯಯ ಮತ್ತು ಲೆಕ್ಕಪತ್ರ ಶಾಖೆ:** | | |
| 9. | ಶಾಖಾಧಿಕಾರಿ | 1 | 4 |
| 10. | ಹಿರಿಯ ಸಹಾಯಕ | 2 | 8 |
| 11. | ಸಹಾಯಕ | 1 | 4 |
| 12. | ಕಿರಿಯ ಸಹಾಯಕ | 1 | 4 |
| 13. | ಬೆರಳಚ್ಚುಗಾರ | 1 | 4 |
| 14. | ದಲಾಯತ್ | 1 | 4 |
| | **ಒಟ್ಟು** | **16** | **64** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಆಇ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ನೀಡಿರುವ ಸಹಮತಿ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 355

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸುವ ಬಗ್ಗೆ.

**ಓದಲಾಗಿದೆ:**
1. ಅಧಿಸೂಚನೆ ಸಂಖ್ಯೆ: ಡಿಪಿಎಆರ್ 58 ಎಸ್‌ಎಎಸ್ 2004 ದಿನಾಂಕ: 7.2.2004.
2. ಸರ್ಕಾರದ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರ ಅನಧಿಕೃತ ಟಿಪ್ಪಣಿ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ 27 ಎಸ್‌ಇಸಿವೈ 2004, ದಿನಾಂಕ 3.3.2004.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ದಿನಾಂಕ: 7.2.2004ರ ಅಧಿಸೂಚನೆಯಲ್ಲಿ ಡಾ: ಎಸ್. ಸುಬ್ರಮಣ್ಯ, ಐ.ಎ.ಎಸ್. ಇವರನ್ನು ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ನಿಮ್ನೀಕರಿಸಲಾದ ಸರ್ಕಾರದ ಕಾರ್ಯದರ್ಶಿ ಹುದ್ದೆಗೆ ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ವರ್ಗಾಯಿಸಿ ನೇಮಿಸಲಾಗಿರುತ್ತದೆ. ಅದರಂತೆ ಸದರಿ ಅಧಿಕಾರಿಗಳು ದಿನಾಂಕ: 19.2.2004ರ ಅಪರಾಹ್ನ ವರ್ಗಾಯಿಸಿ ನೇಮಿಸಲಾದ ಹುದ್ದೆಯಲ್ಲಿ ಕಾರ್ಯವರದಿ ಮಾಡಿಕೊಂಡಿರುತ್ತಾರೆ.

ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಇವರು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ ಹುದ್ದೆಯನ್ನು ಮುಂದುವರೆಸಿರುವ ಬಗ್ಗೆ ಆದೇಶ ಹೊರಡಿಸುವಂತೆ ಕೋರಿರುತ್ತಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಸಸಿವಿ 2004, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಪ್ರಸ್ತುತ ಅಸ್ತಿತ್ವದಲ್ಲಿರುವ ಸರ್ಕಾರದ ಪ್ರಧಾನ ಕಾರ್ಯದರ್ಶಿ ಹುದ್ದೆಯನ್ನು ಡಾ: ಎಸ್. ಸುಬ್ರಮಣ್ಯ, ಐ.ಎ.ಎಸ್. ಇವರು ಕಾರ್ಯವರದಿ ಮಾಡಿಕೊಂಡ ದಿನಾಂಕ: 19.2.2004 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಹಾಗೂ ಒಂದು ವರ್ಷದ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಸರ್ಕಾರದ ಕಾರ್ಯದರ್ಶಿ ಹುದ್ದೆ ಎಂದು ನಿಮ್ನೀಕರಿಸಲಾಗಿದೆ. ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 305 ಸಿಶಾಸೇ 2000, ದಿನಾಂಕ: 8.6.2001ರಲ್ಲಿ ಕಾರ್ಯದರ್ಶಿಯವರ ಆಪ್ತ ಶಾಖೆಗೆ ನಿಗದಿಪಡಿಸಿರುವಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಸಹ ಮಂಜೂರು ಮಾಡಿ ಮುಂದುವರೆಸಲಾಗಿದೆ.

ಸದರಿ ಸರ್ಕಾರದ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆ ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 356

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2)

**ವಿಷಯ:** ಶ್ರೀ ಎಸ್.ಆರ್. ಕೊಳವಿ, ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ರವರ ವಿರುದ್ಧ ಇಲಾಖಾ ವಿಚಾರಣೆ ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 12 ಎಸ್‌ಇಎನ್ 2003 ದಿನಾಂಕ:21-6-2003.
2. ಶ್ರೀ ಜೆ.ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರು, ರವರ ಪತ್ರ ದಿನಾಂಕ: 16-10-2003.
3. ನೋಟೀಸ್ ಸಂಖ್ಯೆ: ಸಿಆಸುಇ 12 ಎಸ್‌ಇಎನ್ 2003, ದಿನಾಂಕ: 19-11-2003.

**ಪ್ರಸ್ತಾವನೆ:**

ಶ್ರೀ ಎಸ್.ಆರ್. ಕೊಳವಿ, ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯರವರು 1989 ರಿಂದ 2001-2002ನೇ ಸಾಲಿನ ವರೆಗಿನ ತಮ್ಮ ಸ್ಥಿರಾಸ್ತಿ, ಚರಾಸ್ತಿಗಳ ವಾರ್ಷಿಕ ಪಟ್ಟಿಯನ್ನು ನೀಡದ ದುರ್ನಡತೆ ಎಸಗಿದ ಆರೋಪಕ್ಕಾಗಿ ಅವರ ವಿರುದ್ಧ ಮೇಲೆ (1) ರಲ್ಲಿ ಓದಲಾದ ದಿನಾಂಕ:21-6-2003ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಜೆ.ಎನ್. ಶ್ರೀನಿವಾಸಮೂರ್ತಿ, ನಿವೃತ್ತ ನ್ಯಾಯಾಧೀಶರು ರವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2) ರಲ್ಲಿ ಓದಲಾದ ದಿನಾಂಕ:16-10-2003 ರ ವಿಚಾರಣಾ ವರದಿ ಸಲ್ಲಿಸಿ ಆರೋಪಕ್ಕೆ ಸಂಬಂಧಪಟ್ಟಂತೆ ಈ ಕೆಳಕಂಡ ನಿರ್ಣಯ ನೀಡಿದರು.

ಶ್ರೀ ಎಸ್.ಆರ್. ಕೊಳವಿ ರವರು ದಿನಾಂಕ: 19-07-2003 ರಂದು ವಿಚಾರಣೆಗೆ ಹಾಜರಾಗಿ ತಮ್ಮ ವೈಯಕ್ತಿಕ ಕಡತವು ಕಳೆದು ಹೋಗಿರುವುದೆಂದು ತಿಳಿಸಿ ನೋಟೀಸ್ ಹಾಗೂ ಅನುಬಂಧದ ಪ್ರತಿಗಳನ್ನು ಪಡೆದಿದ್ದಾರೆ. ಅನಂತರ ದಿನಾಂಕ:26-7-2003 ರಂದು ನಡೆದ ವಿಚಾರಣೆಗೆ ಹಾಜರಾಗಿ ಅನುಬಂಧ-3ರಲ್ಲಿ ನಮೂದಿಸಿದ ದಾಖಲೆಗಳ ಪ್ರತಿಗಳನ್ನು ಪಡೆದಿದ್ದಾರೆ. ಹೆಚ್ಚುವರಿ ದಾಖಲೆಗಳಿಗಾಗಿ ಮುಂದಿನ ವಿಚಾರಣೆಯಲ್ಲಿ ಕೋರಿಕೆ ಸಲ್ಲಿಸುವುದಾಗಿ ತಿಳಿಸಿದರಾದರೂ ಅನಂತರ ನಡೆದ 4 ವಿಚಾರಣೆಗಳಿಗೂ ಹಾಜರಾಗದೆ ಉಳಿದಿದ್ದಾರೆ. ಇದರಿಂದಾಗಿ ದಾಖಲಾತಿಗಳ ಪರಿಶೀಲನೆ ಹಾಗೂ ಸಾಕ್ಷಿಗಳ ಪರೀಕ್ಷೆಯಿಂದಾಗಿ ಅಧಿಕಾರಿಯು 1989-1990ನೇ ಸಾಲುಗಳಿಗೆ ಕ್ರೋಢೀಕೃತ ಪಟ್ಟಿಯನ್ನು ದಿನಾಂಕ:8-2-1991 ರಂದು ಬಿಳಿ ಹಾಳೆಯಲ್ಲಿ ಸಲ್ಲಿಸಿರುವುದು ಕಂಡು ಬರುತ್ತದೆ. ಅಧಿಕಾರಿಯು ಗೃಹ ನಿರ್ಮಾಣ ಮುಂಗಡ ಪಡೆದಿರುವ ಕಾರಣ ಪ್ರತಿ ವರ್ಷಗಳಿಗೂ ಪ್ರತ್ಯೇಕ ಫಾರಂನ್ನು ತುಂಬಿ ಸ್ಥಿರಾಸ್ತಿ - ಚರಾಸ್ತಿ ಪಟ್ಟಿಯನ್ನು ಸಲ್ಲಿಸುವಂತೆ ಅವರಿಗೆ ತಿಳಿಸಲಾಗಿದೆ. ಅನಂತರ ಸಾಕಷ್ಟು ಪತ್ರಗಳನ್ನು ಸರ್ಕಾರದ ವತಿಯಿಂದ ಬರೆದಿರುವುದು ಕಂಡು ಬರುತ್ತದೆ. ಆದರೆ, ಆರೋಪಿಯು ಯಾವುದೇ ಪತ್ರಕ್ಕೆ ಉತ್ತರ ನೀಡಿರುವುದು ಕಡತದಲ್ಲಿ ಮೂಡಿ ಬಂದಿಲ್ಲ. ತಾನು ಸ್ಥಿರಾಸ್ತಿ - ಚರಾಸ್ತಿಗಳ ಮಾಹಿತಿಯನ್ನು ಸಲ್ಲಿಸಿರುವುದಕ್ಕೆ ಆರೋಪಿಯೂ ಸಹ ಯಾವುದೇ ಸಾಕ್ಷ್ಯಾಧಾರಗಳನ್ನು ಸಲ್ಲಿಸಿರುವುದಿಲ್ಲ. ಆದ್ದರಿಂದ ಶ್ರೀ ಎಸ್.ಆರ್. ಕೊಳವಿ, ಉಪ ಕಾರ್ಯದರ್ಶಿ ರವರ ವಿರುದ್ಧ ಮಾಡಲಾದ ಕರ್ನಾಟಕ ನಾಗರೀಕ ಸೇವಾ (ನಡತೆ) ನಿಯಮಾವಳಿ, 1966ರ ನಿಯಮ 23(1) ನ್ನು ಉಲ್ಲಂಘಿಸಿರುವ ಆರೋಪ ಸಾಬೀತಾಗಿದೆ.

ಮೇಲ್ಕಂಡ ವಿಚಾರಣಾ ವರದಿಯ ಪ್ರತಿಯೊಡನೆ ಶ್ರೀ ಎಸ್.ಆರ್. ಕೊಳವಿಯವರಿಗೆ ದಿನಾಂಕ: 19-11-2003ರ 2ನೇ ಕಾರಣ ಕೇಳುವ ನೋಟೀಸ್ ನೀಡಿ ವಿಚಾರಣಾ ವರದಿಯ ಬಗ್ಗೆ ಅವರ ಅಹವಾಲು ಏನಾದರೂ ಇದ್ದಲ್ಲಿ ನಿವೇದಿಸಲು ಅವಕಾಶ ಕಲ್ಪಿಸಲಾಯಿತು. ನೋಟೀಸನ್ನು ಸ್ವೀಕರಿಸಿದ ಆರೋಪಿಯು ನಿಗದಿತ ಕಾಲಾವಧಿಯಲ್ಲಿ ಯಾವುದೇ ಅಹವಾಲು ಸಲ್ಲಿಸಿರುವುದಿಲ್ಲ. ಇದರಿಂದಾಗಿ ವಿಚಾರಣಾ ವರದಿ ಹಾಗೂ ದಾಖಲೆಗಳನ್ನು ಪರಾಮರ್ಶಿಸಲಾಗಿ 1989-90ನೇ ಸಾಲಿಗೆ ಸಂಬಂಧಿಸಿದಂತೆ ಕ್ರೋಢೀಕೃತ ಪಟ್ಟಿಯನ್ನು ಬಿಳೀಹಾಳೆ ಮೇಲೆ ಸಲ್ಲಿಸಿದ್ದು ಬಿಟ್ಟರೆ ಶ್ರೀ ಎಸ್.ಆರ್. ಕೊಳವಿಯವರು ಮತ್ಯಾವುದೇ ಮಾಹಿತಿಯನ್ನು ನೀಡದಿರುವುದು ಕಂಡು ಬರುತ್ತದೆ. ಅನಂತರ ಸರ್ಕಾರದಿಂದ ಮಾತ್ರ ಅವರಿಗೆ ಏಕಮುಖ ಪತ್ರ ಸಂಚಾರ ಆಗಿರುವುದು ಕಂಡು ಬರುತ್ತದೆ. ಆದ್ದರಿಂದ ಅವರ ವಿರುದ್ಧ ಆರೋಪವು ಸಾಬೀತಾಗಿದೆ ಎಂಬ ವಿಚಾರಣಾಧಿಕಾರಿಗಳ ನಿರ್ಣಯವನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 12 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8 (iii) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್.ಆರ್. ಕೊಳವಿ, ಉಪ ಕಾರ್ಯದರ್ಶಿ, ಕರ್ನಾಟಕ ಸರ್ಕಾರದ ಸಚಿವಾಲಯ ಅವರ ಮುಂದಿನ 2 ವಾರ್ಷಿಕ ವೇತನ ಬಡ್ತಿಗಳನ್ನು ಸಂಚಿತ ಪರಿಣಾಮ ಬೀರದಂತೆ (without cumulative effect) ತಡೆಹಿಡಿಯಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 357

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-3)

**ಇಂಧನ ಸಚಿವಾಲಯ**

**ವಿಷಯ:** ಮೆಸರ್ಸ್ ಕಿಂಗ್ಸ್ ವೇ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ, 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಸರತಬ್ಬಿ / 2003 / 331 ದಿನಾಂಕ : 24.02.2004.
2. ದಿನಾಂಕ: 06.03.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಕಿಂಗ್ಸ್ ವೇ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 90 ಎನ್‌ಸಿಇ 2004, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಕಿಂಗ್ಸ್ ವೇ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ, ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಸರತಬ್ಬಿ ಕಿರು ಜಲ ವಿದ್ಯುತ್ ಯೋಜನೆಯನ್ನು (ಲಾಂಗಿಟ್ಯೂಡ್ : 75-51'-40" ಪೂರ್ವ ಮತ್ತು ಲ್ಯಾಟಿಟ್ಯೂಡ್ :12-4'-07" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.)ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝುರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 358

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ವೆನಿಕ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪೆನಿಗೆ, 500 ಕಿಲೊ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ : ಇಂಇ 217 ಎನ್‌ಸಿಇ 2002(4), ದಿನಾಂಕ : 8.12.2003.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿ / 06 / ಕಿಲಾರ / 2003 / 429, ದಿನಾಂಕ : 6.3.2004.
3. ದಿನಾಂಕ : 6.3.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

ಪ್ರಸ್ತಾವನೆ:–

ಮೆಸರ್ಸ್ ಕಿಲಾರ ಪವರ್ ಪ್ರೈವೇಟ್ ಲಿಮಿಟೆಡ್, ಕಂಪೆನಿಗೆ ಹಂಚಿಕೆ ಆಗಿದ್ದ 500 ಕಿಲೊ ವ್ಯಾಟ್‌ನ (ಮದ್ದೂರು ಬ್ರಾಂಚ್ ಕೆನಾಲ್‌ನಲ್ಲಿ) ಕಿರು ಜಲ ವಿದ್ಯುತ್ ಯೋಜನೆಯನ್ನು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ರದ್ದು ಮಾಡಲಾಗಿದೆ.

2. ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಮಲ್ಲಿಗೆರೆ ಗ್ರಾಮದ ಮದ್ದೂರು ಬ್ರಾಂಚ್ ಕೆನಾಲ್‌ನಲ್ಲಿ 500 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಂಇ 99 ಎನ್‌ಸಿಇ 2004, ಬೆಂಗಳೂರು, ದಿನಾಂಕ : 12ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ವೆನಿಕಾ ಗ್ರೀನ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪೆನಿಗೆ, ಮಂಡ್ಯ ಜಿಲ್ಲೆಯ ಮದ್ದೂರು ತಾಲ್ಲೂಕಿನ ಮಲ್ಲಿಗೆರೆ ಗ್ರಾಮದ ಮದ್ದೂರು ಬ್ರಾಂಚ್ ಕೆನಾಲ್‌ನಲ್ಲಿ 500 ಕಿಲೊ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.)ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 359

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಅಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಕಂಪನಿಗೆ, 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಆಯೋಗಡ್ / 2003 / 330 ದಿನಾಂಕ : 24.02.2004.

2. ದಿನಾಂಕ: 06.03.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಅಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಈ ಕಂಪನಿಗೆ ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 92 ಎನ್‌ಸಿಇ 2004, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಅಟ್ರಿಯಾ ಬೃಂದಾವನ್ ಪವರ್ ಲಿಮಿಟೆಡ್ ಈ ಕಂಪನಿಗೆ, ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಅಯೋಗಡ್ ಕಿರು ಜಲ ವಿದ್ಯುತ್ ಯೋಜನೆಯನ್ನು (ಲಾಂಗಿಟ್ಯೂಡ್ : 75-50'-58" ಪೂರ್ವ ಮತ್ತು ಲ್ಯಾಟಿಟ್ಯೂಡ್ :12-3'-58" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.)ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 360

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಪವನ ವಿದ್ಯುತ್ ಯೋಜನೆ ಅಭಿವೃದ್ಧಿಗಾಗಿ ಹ0ಚಿಕೆ ಆದೇಶ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತ ಸ0ಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸ0ಖ್ಯೆ: ಕೆಆರ್ಇಡಿ / 08 / SBPL / 2004 / 217, ದಿನಾ0ಕ : 6.2.2004.

2. ದಿನಾಂಕ : 6.3.2004 ರಂದು ನಡೆದ ಹಂಚಿಕೆ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:–**

ಮೇಲೆ (1)ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಸಜ್ಲಾನ್ ಡಿವಲೆಪರ್ ಪ್ರೈವೇಟ್ ಲಿಮಿಟೆಡ್, ಈ ಕ0ಪೆನಿಗೆ ಮಂಡ್ಯ, ತುಮಕೂರು, ಬೆಂಗಳೂರು, ಜಿಲ್ಲೆಗಳಲ್ಲಿ 111 ಮೆಗಾವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ

ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲಿನ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ : 6.3.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯು ಅನುಮೋದಿಸಿರುತ್ತದೆ. ಇದನ್ನು ಕೂಲ0ಕಷವಾಗಿ ಪರಿಶೀಲಿಸಿದ ನ0ತರ ಈ ಕೆಳಗಿನ0ತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಂಇ 56 ಎನ್‌ಸಿಇ 2004, ಬೆಂಗಳೂರು, ದಿನಾಂಕ : 12ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಸಜ್ಲಾನ್ ಡಿವಲೆಪರ್ ಪ್ರೈವೇಟ್ ಲಿಮಿಟೆಡ್, ಈ ಕಂಪೆನಿಗೆ ಮಂಡ್ಯ, ಹಾಸನ, ಮೈಸೂರು, ಕೋಲಾರ, ತುಮಕೂರು, ಬೆಂಗಳೂರು, ಜಿಲ್ಲೆಗಳಲ್ಲಿ 111 ಮೆಗಾವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಳಗಿನ ಅನುಬಂಧದಲ್ಲಿ ವಿವರಿಸಿದಂತೆ ಈ ಕೆಳಗಿನ ನಿಬ0ಧನೆಗಳಿಗೊಳಪಟ್ಟು ಹಂಚಿಕೆ ಮಾಡಲಾಗಿದೆ :–

**Area details for 111 M.W. wind power project to be established by M/s Suzlon Developers (P) Limited in Karnataka.**

| Sl. No. | District | Description of the areas | Longitude | | Lattitude | | Capacity in M.W. |
|---|---|---|---|---|---|---|---|
| | | | From | To | From | To | |
| 1 | Mandya | A ridge oriented in Northeast-Southwest with peaks 859m and 94m m.a.s.l. located on the west of Chanapura village is bounded by the corresponding geographical co-oridnates. | 76 43’ 40” | 76 45’ | 12 42’ | 12 44’ | 13 |
| 2 | Mandya | A ridge oriented in North-South direction with peak 1069m m.a.s.l. located on the South of Mulukotte village is bounded by the corresponding geographical co-oridnates. | 76 38’ 50” | 76 39’ | 12 38’ 30” | 12 38’ 30’ | |
| 3. | Mandya | A ridge oriented in Northeast-Southwest with peak 988 m m.a.s.l. located on the east of Chinakurli village is bounded by the corresponding geographical co-oridnates. | 70 37’ 15” | 76 38’ | 12 31’ 20” | 12 32’ 30” | |
| 4. | Tumkur | A non-uniform ridge with peaks 938m and 987m m.a.s.l. is located in Handlkupa SF located on the East of Malapura village is bounded by the corresponding geographical co-oridnates. | 70 58’ 20” | 76 59’ 10” | 12 54’ 40” | 12 57’ 50” | 9 |
| 5. | Tumkur | A ridge oriented in North-South with peaks 899 m m.a.s.l. located on the North of Sugenahalli village is bounded by the corresponding geographical co-oridnates. | 76 59’ 50” | 77 0’ | 12 49’ 50” | 12 50’ 50” | |
| 6 | Bangalore | Two ridges with peaks 977 and 1054 m m.a.s.l. are located in Siddevara betta SF and are bounded by the corresponding geographical co-oridnates. | 7 13’ 20” | 77 14’ 20” | 12 52’ 30” | 12 53’ 30’ | 3 |

| Sl. No. | District | Description of the areas | Longitude | | Lattitude | | Capacity in M.W. |
|---|---|---|---|---|---|---|---|
| | | | From | To | From | To | |
| 7. | Tumkur | The non-uniform three ridges are located in Madhukeri SF and Kolikal SF are located near by North of Kurana Kotte village and Dodaniramunga village are bounded by the corresponding geographical co-oridnates. | 77 8' 50" | 77 9' 5" | 13 36' 30" | 13 37' | 8 |
| | | | 77 7' 10" | 77 9' | 13 32' 30" | 13 33' 45" | |
| 8. | Hassan | A non-continous ridge orienter in North-South direction with peaks 1030 M, 1040M, 995M, 1048 and 1002 M is located on the East of Gopalpura village is bounded by the corresponding geographical co-oridnates. | 7 6 16' 45" | 76 17' 40" | 12 53' 10" | 12 57' 10" | 7 |
| 9. | Bangalore | Two ridges with peaks 973m and 892m are located in South of Thipagondahalli village is bounded by the corresponding geographical co-oridnates. | 77 20' 30" | 77 21' | 12 53' 10" | 12 56' 25" | 14 |
| 10. | Bangalore | A non-continuous ridge oriented in North-south direction with peaks 952m, 967m, and 867m is located on the North-East of Mayanahalli is bounded by the corresponding geographical co-oridnates. | 77 20' | 77 21' 10" | 12 46' 50" | 12 50" 50" | |
| 11. | Kolar | Three ridges oriented in Northeast-Southwest direction and are located in Northwest of Chikkabalapura village are bounded by the corresponding geographical co-oridnates. | 77 40' 20" | 77 42' | 13 27' | 13 29' 20" | 8 |
| 12. | Mandya | A ridge oriented in Northeast-Southwest direction with peaks 936 m m.a.s.l is bounded by the corresponding geographical co-oridnates. | 77 9' 20" | 77 9' 55" | 12 15' 50" | 12 16' 30" | 3 |
| 13. | Bangalore | A non-continous ridge oriented in Northeast-southwest direction with peaks 1049m and 1057m m.a.s.l. is located in Sakaleshpura SF situated on the South-West of Kurubahalli is bounded by the corresponding geographical co-oridnates. | 77 15' 30" | 77 16' 30" | 12 28' 25" | 12 29' 30" | 8 |

| Sl. No. | District | Description of the areas | Longitude | | Lattitude | | Capacity in M.W. |
|---|---|---|---|---|---|---|---|
| | | | From | To | From | To | |
| 14. | Bangalore | A non-uniform ridgesare in Northwest-Southeast direction situated on the East of Dodakoppa is bounded by the corresponding geographical co-oridnates. | 77 29' 10" | 77 30' | 12 22' 20" | 12 28' 30" | |
| 15. | Bangalore | Three ridges oriented with peaks 871m and 891m.a.s.l. are situated close by Elehosahalli and are bounded geographical co-oridnates. | 77 10' | 77 11' 20" | 12 41' 30" | 12 43' | 15 |
| 16. | Bangalore | Two ridges oriented in North-South direction with peaks 830m and 832m.a.s.l. are located near by Thimasandra & Shibanahalli are bounded by the corresponding geographical co-oridnates. | 77 6' 50" | 77 7' 30" | 12 39' 20" | 12 42' 55" | |
| 17. | Bangalore | A ridge oriented in North-South peaks 842m and 864m is in Narikalgudda SF situated on the East of Balapatna is bounded by the corresponding geographical co-oridnates. | 77 13' 50" | 77 14' 40" | 12 32' 40" | 12 33' 55" | |
| 18. | Bangalore | A ridges oriented in North-South direction situated on the West of Gotegahalli is bounded by the corresponding geographical co- oridnates. | 77 30' 20" | 77 30' 50" | 12 42' 50" | 12 43' 50" | |
| 19. | Bangalore | Two non uniform ridges with peaks 978 m, 950m and 991m m.a.s.l are located close by Belekere and Siralvadi Villages and are bounded by the corresponding geographical co- oridnates. | 77 35' 30" | 77 36' 30" | 12 36' | 12 40' | 12 |
| 20. | Mysore | Three non-uniform ridges with peaks 1079m, 1000m and 1071m in chikkyalur RF are bounded by the corresponding geographical co-oridnates. | 77 11' | 77 14' 15" | 12 12' | 12 14' 40" | 11 |
| | | | | | | Total | 111 |

3. ಯೋಜನಾಭಿವೃದ್ಧಿದಾರರು ಸರ್ಕಾರದೊ0ದಿಗೆ ಒಡ0ಬಡಿಕೆ ಮಾಡಿಕೊಳ್ಳುವ ಮೊದಲು ಕರ್ನಾಟಕ ನವೀಕರಿಸಬಹುದಾದ ಇ0ಧನ ಅಭಿವೃದ್ಧಿ ನಿಯಮಿತಕ್ಕೆ ಮೆಗಾವಾಟ್ ಒ0ದಕ್ಕೆ ರೂ.25,000 ದ0ತೆ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತು0ಬುವುದು.

2 ಈ ಆದೇಶ ಹೊರಡಿಸಿದ ದಿನಾ೦ಕದಿ೦ದ 3 ತಿ೦ಗಳ ಒಳಗೆ ಯೋಜನಾಭಿವೃದ್ಧಿದಾರರು ರೂ.400ರ ಛಾಪಾ ಕಾಗದದಲ್ಲಿ ಸರ್ಕಾರದೊ೦ದಿಗೆ ಒಡ೦ಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹ೦ಚಿಕೆ ಆದೇಶ ತ೦ತಾನೆ ರದ್ದಾಗಿದೆ ಎ೦ದು ಭಾವಿಸುವುದು.

4. ಹ೦ಚಿಕೆದಾರರು ಪೂರ್ತಿ ಒ೦ದು ಪವನ ವರ್ಷಕ್ಕೆ ಕಡಿಮೆ ಇಲ್ಲದ೦ತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇ೦ಧನ ಅಭಿವೃದ್ಧಿ ನಿಯಮಿತದಿ೦ದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿ೦ಗ್ ಮಾಡಿರುವ ಅ೦ಶಗಳನ್ನೊಳಗೊ೦ಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇ೦ಧನ ಅಭಿವೃದ್ಧಿ ನಿಯಮಿತಕ್ಕೆ ಮ೦ಡಿಸಬೇಕು. ತಾ೦ತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ಆಗಿ ನಕ್ಷೆ ಮತ್ತು ವಿ೦ಡ್ ಫಾರ್ಮ್‌ನ ಲೇ ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇ೦ಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನ೦ತೆ ಇದೆ ಎ೦ಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟನಲ್ಲಿ ಪವನ ವೇಗದ ಅಳತೆ 'ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವ೦ತೆ ಪ್ರತೀ 5 ಮೆಗಾವಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒ೦ದರ೦ತೆ ಗಾಳಿ ಕ೦ಬವನ್ನು (ವಿ೦ಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇ೦ಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ |
|---|---|---|
| > 200 ಕಿಲೋ ವ್ಯಾಟ್ ನಿಂದ 300 ಕಿಲೋವ್ಯಾಟ್ | 18 | 1 |
| > 300 ಕಿಲೋವ್ಯಾಟ್ ನಿಂದ 500 ಕಿ.ವ್ಯಾ. | 15 | 1 |
| > 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| > 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿ೦ದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.
6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ / ಕಂದಾಯ / ಪರಿಸರ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳಬಹುದು.
7. ಮಂಡಳಿಯ ನೀತಿ ನಿಯಮಗಳಿಗನುಗುಣವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವೀಲಿಂಗ್ ಮತ್ತು ಬ್ಯಾಂಕಿಂಗ್ / ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.
8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.
9. ಯೋಜನೆಯನ್ನು ತ್ವರಿತವಾಗಿ ಮುಕ್ತಾಯ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 361

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** **ಮೆಸರ್ಸ್ ಗೋಲ್ಫ್ ಲಿಂಕ್ಸ್ ಸಾಫ್ಟ್‌ವೇರ್ ಪಾರ್ಕ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ, 5.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.**

**ಓದಲಾಗಿದೆ:** 1. **ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಗುಮ್ಮಕೊಲ್ಲಿ / 2003 / 328 ದಿನಾಂಕ : 24.02.2004.**

2. **ದಿನಾಂಕ: 06.03.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.**

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಗೋಲ್ಫ್ ಲಿಂಕ್ಸ್ ಸಾಫ್ಟ್‌ವೇರ್ ಪಾರ್ಕ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 5.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 89 ಎನ್‌ಸಿಇ 2004, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಗೋಲ್ಡ್ ಲಿಂಕ್ಸ್ ಸಾಫ್ಟ್ ವೇರ್ ಪಾರ್ಕ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ, ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 5.5 ಮೆಗಾ ವ್ಯಾಟ್ ಸಾಮರ್ಥ್ಯದ ಗುಮ್ಮಕೊಲ್ಲಿ ಕಿರು ಜಲ ವಿದ್ಯುತ್ ಯೋಜನೆಯನ್ನು (ಲಾಂಗಿಟ್ಯೂಡ್ : 75-48'-13" ಪೂರ್ವ ಮತ್ತು ಲ್ಯಾಟಿಟ್ಯೂಡ್ :12-3'-58" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.)ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಟಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 362

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

**ವಿಷಯ:** ಮೆಸರ್ಸ್ ಬಾಲಾಜಿ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ, 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರುಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ / 06 / ಕಕ್ಕೆಹೊಳೆ / 2003 / 329 ದಿನಾಂಕ : 24.02.2004.
2. ದಿನಾಂಕ: 06.03.2004 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಸರ್ಸ್ ಬಾಲಾಜಿ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿಯು ಅನುಮೋದಿಸಿದೆ. ಇದನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಂಇ 91 ಎನ್‌ಸಿಇ 2004, ಬೆಂಗಳೂರು, ದಿನಾಂಕ: 12ನೇ ಮಾರ್ಚ್ 2004**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆಸರ್ಸ್ ಬಾಲಾಜಿ ಹೈಡಲ್ ಪವರ್ ಪ್ರೈವೇಟ್ ಲಿಮಿಟೆಡ್ ಈ ಕಂಪನಿಗೆ, ಕೊಡಗು ಜಿಲ್ಲೆಯ ವಿರಾಜಪೇಟೆ ತಾಲ್ಲೂಕಿನ ಮುಕುಟ ಗ್ರಾಮದ ಬಳಿ ಬಾರಾಪೊಳೆ ಹೊಳೆಗೆ ಅಡ್ಡಲಾಗಿ 6 ಮೆಗಾ ವ್ಯಾಟ್

**ಸಾಮರ್ಥ್ಯದ ಕಕ್ಕೆಹೊಳೆ ಕಿರು ಜಲ ವಿದ್ಯುತ್ ಯೋಜನೆಯನ್ನು (ಲಾಂಗಿಟ್ಯೂಡ್ : 75-50'-18" ಪೂರ್ವ ಮತ್ತು ಲ್ಯಾಟಿಟ್ಯೂಡ್ :12-3'-55" ಉತ್ತರ) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.**

1.(ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪೆನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಕಂದಾಯ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.)ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಝುರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 363

**ಕೆ. ಎಲ್. ಜಯರಾಂ**

ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ.

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯದಲ್ಲಿ ಗೃಹರಕ್ಷಕರ ಸಂಖ್ಯೆಯನ್ನು ಹಾಲಿ ಇರುವ 18,700 ರಿಂದ 25,000 ರವರೆಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಒಇ 34 ಕಗ್ರಸೇ 93, ದಿನಾಂಕ:18-12-93.

2. ಮಹಾಸಮಾದೇಷ್ಟರ ಗೃಹರಕ್ಷಕದಳ ಪತ್ರ ಸಂಖ್ಯೆ:ಆಡಳಿತ (2) 42:ಗೃದಬ:01-02, ದಿನಾಂಕ: 17-6-2003.

**ಪ್ರಸ್ತಾವನೆ:**

ರಾಜ್ಯದಲ್ಲಿನ ಕಾನೂನು ಮತ್ತು ಸುವ್ಯವಸ್ಥೆಯನ್ನು ಸನ್ನಿವೇಶಗಳನ್ನು ಹಾಗೂ ಪೊಲೀಸ್ ಇಲಾಖೆಯಿಂದ ಗೃಹರಕ್ಷಕರ ಬೇಡಿಕೆಯನ್ನು ಅವಲೋಕಿಸಿ ರಾಜ್ಯ ಸರ್ಕಾರವು ಮೇಲೆ ಓದಲಾದ (1)ರ ಆದೇಶದಲ್ಲಿ ಗೃಹ ರಕ್ಷಕರಿಗೆ ಸಂಖ್ಯಾಬಲವನ್ನು 17,000 ರಿಂದ 25,000 ಹೆಚ್ಚಿಸಲು ಸರ್ಕಾರ ಮಂಜೂರಾತಿಯನ್ನು ನೀಡಲಾಗಿದೆ. ಕೇಂದ್ರ ಸರ್ಕಾರದ ಪತ್ರ ಸಂಖ್ಯೆ:ಡಿ:35011:01:87 ಡಿಜಿಸಿಡಿ (ಹೆಚ್‌ಜಿ) ದಿನಾಂಕ: 18-2-1994ರಲ್ಲಿ ರಾಜ್ಯದಲ್ಲಿನ ಗೃಹ ರಕ್ಷಕ ದಳ ಸಂಖ್ಯಾಬಲವನ್ನು 17,000 ರಿಂದ 18,700ಕ್ಕೆ ಹೆಚ್ಚಿಸಿರುತ್ತದೆ ರಾಜ್ಯ ಸರ್ಕಾರದ ಮಂಜೂರಾತಿಯ ಮೇರೆಗೆ ಗೃಹರಕ್ಷಕರ ಸಂಖ್ಯಾಬಲವನ್ನು 25,000ಕ್ಕೆ ಹೆಚ್ಚಿಸುವಂತೆ ಕೇಂದ್ರ ಸರ್ಕಾರಕ್ಕೆ ಕೋರಿಕೆಯನ್ನು ಸಲ್ಲಿಸಲಾಗಿತ್ತು. ಆದರೆ ಕೇಂದ್ರ ಸರ್ಕಾರದ ಸಹಮತಿ ದೊರೆಯದ ಕಾರಣ 6300 ಹೆಚ್ಚುವರಿ ಗೃಹರಕ್ಷಕರನ್ನು ಭರ್ತಿ ಮಾಡಿಕೊಳ್ಳುವ ಪ್ರಕ್ರಿಯೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಲಾಗಿತ್ತು.

ಇತ್ತೀಚೆಗೆ ಭಾರತ ಸರ್ಕಾರದ ಗೃಹ ಮಂತ್ರಾಲಯದಲ್ಲಿ ನಡೆದ ಮಹಾ ಸಮಾದೇಷ್ಟರುಗಳ 12ನೇ ದ್ವೈವಾರ್ಷಿಕ ಸಮ್ಮೇಳನದಲ್ಲಿ ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳಲ್ಲಿನ ಗೃಹರಕ್ಷಕರ ಈಗನ ಸಂಖ್ಯಾಬಲವನ್ನು ಹೆಚ್ಚಿಸುವ ವಿಚಾರ ಪ್ರಸ್ತಾಪಕ್ಕೆ ಬಂದಿತು. ಈ ಹಂತದಲ್ಲಿ ಬಿಹಾರ ರಾಜ್ಯವು ತಮ್ಮ ರಾಜ್ಯಕ್ಕೆ ಕೇಂದ್ರ ಸರ್ಕಾರದಿಂದ 46,000 ಗೃಹ ರಕ್ಷಕರ ಸಂಖ್ಯಾಬಲ ಮಂಜೂರಾಗಿದ್ದು ಸದರಿ ಸಂಖ್ಯಾಬಲವನ್ನು ರಾಜ್ಯ ಸರ್ಕಾರವು ಒಂದು ಲಕ್ಷ ಸಂಖ್ಯಾಬಲಕ್ಕೆ ಹೆಚ್ಚಿಸಿರುವುದಾಗಿ ಹಾಗೂ ಹೆಚ್ಚುವರಿ ಸಂಖ್ಯಾಬಲಕ್ಕೆ ತಗಲುವ ವೆಚ್ಚವನ್ನು

ರಾಜ್ಯ ಸರ್ಕಾರವೇ ಭರಿಸುತ್ತಿದೆ ಎಂಬ ವಿಚಾರವನ್ನು ಸಮ್ಮೇಳನದ ಮುಂದಿಟ್ಟಿತು. ಈ ಬಗ್ಗೆ ಮುಂದುವರೆದು ಸಂಖ್ಯಾಬಲವನ್ನು ಹೆಚ್ಚಿಸುವ ವಿಷಯವು ಕೇಂದ್ರ ಸರ್ಕಾರದ ಮುಂದಿದ್ದು, ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳು ಅವರ ಅಗತ್ಯಗೆ ತಕ್ಕಂತೆ ಗೃಹರಕ್ಷಕರ ಸಂಖ್ಯಾಬಲವನ್ನು ಹೆಚ್ಚಿಸಿಕೊಳ್ಳಬಹುದೆಂದು ಹಾಗೂ ಈ ಬಗ್ಗೆ ಕೇಂದ್ರ ಸರ್ಕಾರದಿಂದ ಅನುಮೋದನೆ ಲಭ್ಯವಾಗುವವರೆಗೆ, ಹೆಚ್ಚುವರಿ ಗೃಹರಕ್ಷಕರ ಸಂಖ್ಯಾಬಲಕ್ಕೆ ತಗಲುವ ವೆಚ್ಚವನ್ನು ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶಗಳೇ ಭರಿಸತಕ್ಕದೆಂದು ಹಾಗೂ ಅನುಮೋದನೆ ದೊರೆತ ಬಳಿಕ ಮುಂದಿನ ದಿನಾಂಕದಿಂದ ಹೆಚ್ಚುವರಿ ಸಂಖ್ಯಾಬಲಕ್ಕೆ ತಗಲುವ ವೆಚ್ಚದ ಪೈಕಿ ಶೇಕಡಾ 25 ರಷ್ಟು ವೆಚ್ಚವನ್ನು ಕೇಂದ್ರ ಸರ್ಕಾರದಿಂದ ಮರುಪಾವತಿ ಪಡೆದುಕೊಳ್ಳಬಹುದೆಂಬ ತೀರ್ಮಾನಕ್ಕೆ ಬರಲಾಯಿತು.

ಇತ್ತೀಚೆಗೆ ಗೃಹರಕ್ಷಕರ ಕಾರ್ಯವ್ಯಾಪ್ತಿ ಬಹು ಮುಖ್ಯವಾಗಿದ್ದು, ಬಹುತೇಕ ಸಂದರ್ಭಗಳಲ್ಲಿ ಕಾನೂನು ಮತ್ತು ಸುವ್ಯವಸ್ಥೆ ಪಾಲನೆಗಾಗಿ ಗೃಹರಕ್ಷಕರ ಸೇವೆಯನ್ನು ಬಳಸಿಕೊಳ್ಳಲಾಗುತ್ತಿದ್ದು ಗೃಹರಕ್ಷಕರ ಸೇವೆಗೆ ಪೊಲೀಸ್ ಇಲಾಖೆಯಿಂದ ಹೆಚ್ಚಿನ ಬೇಡಿಕೆ ಇರುವುದರಿಂದ ರಾಜ್ಯ ಸರ್ಕಾರ ಈಗಾಗಲೇ ಮಂಜೂರು ಮಾಡಿರುವ ಸಂಖ್ಯಾಬಲದ ಮಿತಿಗೊಳಪಟ್ಟು, ಹೆಚ್ಚುವರಿಯಾಗಿ 6,300 ಗೃಹರಕ್ಷಕರನ್ನು ತ್ವರಿತವಾಗಿ ಭರ್ತಿ ಮಾಡಿಕೊಳ್ಳುವ ಅವಶ್ಯಕತೆಯಿದೆ. ಹೆಚ್ಚುವರಿ ಸಂಖ್ಯಾಬಲಕ್ಕೆ ತಗಲುವ ವೆಚ್ಚವನ್ನು ಕೇಂದ್ರ ಸರ್ಕಾರದಿಂದ ಅನುಮೋದನೆ ಲಭ್ಯವಾಗುವವರೆಗೆ ರಾಜ್ಯ ಸರ್ಕಾರವೇ ಸಂಪೂರ್ಣವಾಗಿ ಭರಿಸಲು ಒಪ್ಪಿದಲ್ಲಿ ಹೆಚ್ಚುವರಿ ಗೃಹರಕ್ಷಕರನ್ನು ಕೂಡಲೇ ಭರ್ತಿ ಮಾಡಲು ಅಗತ್ಯ ಕ್ರಮ ಕೈಗೊಳ್ಳಲಾಗುವುದು.

ಹೆಚ್ಚುವರಿಯಾಗಿ ಭರ್ತಿ ಮಾಡಿಕೊಳ್ಳಲಾಗುವ 6,300 ಗೃಹರಕ್ಷಕ ಸಂಖ್ಯಾಬಲಕ್ಕೆ ಪ್ರಥಮ ಹಂತದಲ್ಲಿ ಸಮವಸ್ತ್ರ ಸಾಮಗ್ರಿಗಳ ಪೂರೈಕೆಗಾಗಿ ಹಾಗೂ ಕವಾಯತು ಭತ್ಯೆ ನೀಡಿಕೆಗಾಗಿ ಈ ಕೆಳಕಂಡಂತೆ ಹೆಚ್ಚುವರಿ ವೆಚ್ಚ ತಗಲುತ್ತದೆ.

| | | |
|---|---|---|
| (1) | 6300 ಹೊಸ ಗೃಹರಕ್ಷಕರಿಗೆ ತಲಾ ಒಂದು ಜೊತೆ ಸಮವಸ್ತ್ರ ಹಾಗೂ ಇತರೇ ಸಾಮಗ್ರಿಗಳ ಪೂರೈಕೆಗೆ ತಲಾ ಒಬ್ಬರಿಗೆ ತಗಲುವ ಅಂದಾಜು ವೆಚ್ಚ ರೂ. 820-00 ರಂತೆ | 51,66,000-00 |
| (2) | ಕವಾಯತು ಭತ್ಯೆ ತಿಂಗಳೊಂದಕ್ಕೆ 4 ಕವಾಯತುಗಳ ಕವಾಯತು ಒಂದಕ್ಕೆ ರೂ.14-00 ರಂತೆ 6300 ಗೃಹರಕ್ಷಕರಿಗೆ 6300 4 14 12 | 42,33,600-00 |
| | **ಒಟ್ಟು** | **93,99,600-00** |

6300 ಹೆಚ್ಚುವರಿ ಗೃಹರಕ್ಷಕರನ್ನು ಭರ್ತಿ ಮಾಡಿಕೊಳ್ಳುವ ದಿಸೆಯಲ್ಲಿ ಅಂದಾಜು 94 ಲಕ್ಷ ರೂಪಾಯಿಗಳ ಹೆಚ್ಚುವರಿ ವೆಚ್ಚ ಉಂಟಾಗುತ್ತದೆ. ಮೇಲೆ ತಿಳಿಸಲಾದಂತೆ ಹೆಚ್ಚುವರಿ ವೆಚ್ಚವನ್ನು ರಾಜ್ಯ ಸರ್ಕಾರವೇ ಭರಿಸಬೇಕಾಗುತ್ತದೆ. ಭಾರತ ಸರ್ಕಾರದ ಅನುಮೋದನೆ ದೊರೆತಬಳಿಕ ಮುಂದಿನ ದಿನಾಂಕದಿಂದ ಹೆಚ್ಚುವರಿ ವೆಚ್ಚದ ಪೈಕಿ ಶೇಕಡಾ 25 ರಷ್ಟು ವೆಚ್ಚವನ್ನು ಕೇಂದ್ರ ಸರ್ಕಾರದಿಂದ ಮರುಪಾವತಿ ಪಡೆಯತಕ್ಕದ್ದಾಗಿದೆ. ಪ್ರಸ್ತಾವಿಸಲಾದ ವೆಚ್ಚವು ಹೆಚ್ಚುವರಿ ವೆಚ್ಚವಾಗಿದ್ದು, ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಸೇರ್ಪಡೆಯಾಗದೇ ಇರುವುದರಿಂದ, ಉದ್ದೇಶಿತ ವೆಚ್ಚವನ್ನು ಭರಿಸಲು ಕೆಳಕಾಣಿಸಿದ ಲೆಕ್ಕ ಶೀರ್ಷಿಕೆಗಳ ಅಡಿಯಲ್ಲಿ ಹೆಚ್ಚುವರಿ ಅನುದಾನ ಅವಶ್ಯಕತೆ ಇರುತ್ತದೆ.

| | | | |
|---|---|---|---|
| 2070 | - | ಇತರೆ ಆಡಳಿತ ಸೇವೆಗಳು | |
| 107 | - | ಗೃಹರಕ್ಷಕದಳ | |
| 01 | - | ಗೃಹರಕ್ಷಕ ದಳದ ನಿರ್ದೇಶನಾಲಯ | |
| 221 | - | ಸಾಮಗ್ರಿ ಮತ್ತು ಸರಬರಾಜು | .... 51.66 ಲಕ್ಷಗಳು |
| **015** | - | **ಪೂರಕ ವೆಚ್ಚಗಳು** | .... 42.34 ಲಕ್ಷಗಳು |

ಮೇಲೆ ವಿವರಿಸಲಾದಂತೆ, ಭಾರತ ಸರ್ಕಾರದಿಂದ ಮಂಜೂರಾತಿ ಲಭ್ಯವಾಗುವವರೆಗೆ, 6300 ಹೆಚ್ಚುವರಿ ಗೃಹರಕ್ಷಕರಿಗೆ ತಗಲುವ ವೆಚ್ಚವನ್ನು ಸಂಪೂರ್ಣವಾಗಿ ರಾಜ್ಯ ಸರ್ಕಾರವೇ ಭರಿಸಬೇಕಾಗಿರುವುದರಿಂದ ಈ ಸಂಬಂಧ 94 ಲಕ್ಷ ರೂಪಾಯಿಗಳ ಹೆಚ್ಚುವರಿ ಅನುದಾನ ಬಿಡುಗಡೆ ಮಾಡಿ, ಸರ್ಕಾರದ ಮಂಜೂರಾತಿಯನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 59 ಕಗ್ರಸೇ 2003, ಬೆಂಗಳೂರು, ದಿನಾಂಕ: 23ನೇ ಡಿಸೆಂಬರ್ 2003**

ಸಮಾಜಕ್ಕೆ ಹೆಚ್ಚಿನ ಸೇವೆಯನ್ನು ಸಲ್ಲಿಸುವ ದಿಸೆಯಲ್ಲಿ ಗೃಹರಕ್ಷಕ ಸಂಸ್ಥೆಯನ್ನು ಬಲಪಡಿಸಲು ಹಾಗೂ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವಲ್ಲಿ ಪೊಲೀಸ್ ಇಲಾಖೆಯ ಬೇಡಿಕೆಯನ್ನು ಈಡೇರಿಸುವ ಉದ್ದೇಶದಿಂದ ಕರ್ನಾಟಕ ರಾಜ್ಯ ಗೃಹರಕ್ಷಕದಳ ಬಲವನ್ನು ಈಗಿರುವ 18,700 ರಿಂದ 25000ಕ್ಕೆ ಹೆಚ್ಚಿಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

2. ಸದರಿ ವೆಚ್ಚವನ್ನು 2003-2004ನೇ ಸಾಲಿನ ಆಯವ್ಯಯದಲ್ಲಿ ಇಲಾಖೆಗೆ ಒದಗಿಸಲಾಗಿರುವ ಹಣದಲ್ಲಿ ಉಂಟಾಗುವ ಒಟ್ಟಾರೆ ಉಳಿತಾಯದಿಂದ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ರಾಜು**

ಪಿ.ಆರ್. 364

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)

ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಪೊಲೀಸ್ ಸಹಾಯಕ ಸೇವೆಗಳು)

**ವಿಷಯ:** ಬಿಜಾಪುರ ಕೇಂದ್ರ ಕಾರಾಗೃಹದ ಕೈದಿ ಸಂಖ್ಯೆ 838 ಫತ್ರುಸಾಬ್ ಲಾಡ್ಲೆಸಾಬ್ ಮರಗಾನೂರ ಈತನನ್ನು ವೈದ್ಯಕೀಯ ಆಧಾರದ ಮೇಲೆ ಅಕಾಲಿಕ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರುರವರ ಪತ್ರ ಸಂಖ್ಯೆ:ಜೆ2:ಸಿಆರ್-66:2002-03 ದಿನಾಂಕ: 30-10-2003.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರ ದಿನಾಂಕ 30-10-2003ರಲ್ಲಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರುರವರು ಬಿಜಾಪುರ ಕೇಂದ್ರ ಕಾರಾಗೃಹದಲ್ಲಿ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ ಕೈದಿ ಸಂಖ್ಯೆ:838 ಫತ್ರುಸಾಬ ಲಾಡ್ಲೆಸಾಬ್ ಮರಗಾನೂರ ಈತನು ದಿನಾಂಕ 17-6-2003ಕ್ಕೆ 9 ವರ್ಷ 8 ತಿಂಗಳು ವಾಸ್ತವ ಸಜೆಯನ್ನು ಪೂರೈಸಿದ್ದು ಸದರಿ ಬಂದಿಯು "ಈ ಹಿಂದಿನಿಂದ ಹೈಡಾಟಿಡ್ ಸಿಸ್ಟ್ ಆಫ್ ಲಿವರ್ ವಿತ್ ರಿಕ್ಯೂರಿನ್ಸ್ ಅಂಡ್ ಚಾರೋನಿಕ್ ಬ್ರೋನ್‌ಚಿಯಲ್ ಅಸ್ತಮಾ ವಿತ್ ಎಪಿಸ್ಕಮಾ" ಎಂಬ ಖಾಯಿಲೆಯಿಂದ ಬಳಲುತ್ತಿದ್ದು, ಈ ಬಗ್ಗೆ ಜಿಲ್ಲಾ ಸರ್ಜನ್ ಬಿಜಾಪೂರ್ ಇವರು ಪ್ರಮಾಣೀಕರಿಸಿರುತ್ತಾರೆ. ಹಾಗೂ ಬಿಜಾಪೂರ ಜಿಲ್ಲೆಯ ದಂಡಾಧಿಕಾರಿಗಳು ಮತ್ತು ಜಿಲ್ಲಾ ಆರಕ್ಷಕ ಅಧೀಕ್ಷಕರುಗಳು ಸದರಿ ಕೈದಿಯು ಮಾರಣಾಂತಿಕ ಖಾಯಿಲೆಯಿಂದ ಬಳಲುತ್ತಿರುವುದರಿಂದ ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳು 1974ರ ನಿಯಮ 68ರ ಮೇರೆಗೆ ಅಕಾಲಿಕ ಬಿಡುಗಡೆ ಮಾಡಲು ಶಿಫಾರಸ್ಸು ಮಾಡಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಒಸಾಇ 294 ಪಿಆರ್‌ಎ 2003, ಬೆಂಗಳೂರು, ದಿನಾಂಕ: 21ನೇ ಜನವರಿ 2004**

ಬಿಜಾಪುರ ಕೇಂದ್ರ ಕಾರಾಗೃಹದಲ್ಲಿ ಜೀವಾವಧಿ ಶಿಕ್ಷೆ ಅನುಭವಿಸುತ್ತಿರುವ ಕೈದಿ ಸಂಖ್ಯೆ:838 ಫತ್ರುಸಾಬ ಲಾಡ್ಲೆಸಾಬ್ ಮರಗಾನೂರ ಈತನನ್ನು previously operated Hydatid Cyst of Liver with Recurrence and Chronic Bronchial Asthma with Emphyscma ರೋಗದಿಂದ ನರಳುತ್ತಿರುವುದಾಗಿ ಜಿಲ್ಲಾದಂಡಾಧಿಕಾರಿಗಳು, ಹಾಗೂ ಜಿಲ್ಲಾ ಸರ್ಜನ್, ವಿಜಾಪೂರರವರು ವೈದ್ಯಕೀಯ ಪ್ರಮಾಣೀಕರಿಸಿರುವ ಷರತ್ತಿನ ಮೇಲೆ ಮತ್ತು ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳು 1974ರ ನಿಯಮ 68ರಲ್ಲಿನ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಅಕಾಲಿಕ ಬಿಡುಗಡೆ ಮಾಡುವಂತೆ ಸರ್ಕಾರವು ಆದೇಶಿಸಿದೆ.

ಅಧೀಕ್ಷಕರು, ಕೇಂದ್ರ ಕಾರಾಗೃಹ, ಬಿಜಾಪುರ ಇವರು ಕರ್ನಾಟಕ ಕಾರಾಗೃಹಗಳ ನಿಯಮಾವಳಿಗಳು 1974ರ ನಿಯಮ 71ರಂತೆ ಈ ಕೈದಿಯ ಅಕಾಲಿಕ ಬಿಡುಗಡೆಯ ಮುನ್ನ ನಿಗದಿತ ನಮೂನೆಯಲ್ಲಿ ಈತನ ಒಪ್ಪಿಗೆಯನ್ನು ಪಡೆಯಲು ಸೂಚಿಸಿದೆ. ಹಾಗೂ ಕೈದಿಯ ಅಕಾಲಿಕ ಬಿಡುಗಡೆಗೆ ಪೂರ್ವ ಮತ್ತು ಬಿಡುಗಡೆಯ ನಂತರ ಕಾರಾಗೃಹಗಳ ನಿಯಮಾವಳಿಗಳು 1974ರ ನಿಯಮ ಮತ್ತು ಕರ್ನಾಟಕ ಕಾರಾಗೃಹಗಳ ಕೈಪಿಡಿಯಲ್ಲಿ ನಿಗದಿಪಡಿಸಿದ ವಿಧಿ ವಿಧಾನಗಳನ್ನು ಪೂರ್ಣವಾಗಿ ಅನುಸರಿಸುವಂತೆಯೂ ಸಹ ನಿರ್ದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 365

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

**ವಿಷಯ:** ಕಾರಾಗೃಹಗಳ ಮಹಾನಿರೀಕ್ಷಕರವರ ಹುದ್ದೆಯನ್ನು ಪೊಲೀಸ್ ಮಹಾನಿರ್ದೇಶಕರ ಮತ್ತು ಕರ್ನಾಟಕ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆ ಎಂದು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 110 ಪಿಆರ್‌ಇ 03, ದಿನಾಂಕ:07-10-03.
2. ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು ಬೆಂಗಳೂರು ಇವರ ಪತ್ರ ಸಂ. ಕಸಿವಿ ನಗದು ಸಿಆರ್-74/03-04, ದಿ. 07-11-03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿ.7-10-03ರ ಆದೇಶದಲ್ಲಿ ಶ್ರೀ ಎಸ್.ಎನ್. ಬೋರ್‌ಕರ್ ಐ.ಪಿ.ಎಸ್. ರವರು ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆಯನ್ನು ಕರ್ತವ್ಯ : ಪ್ರಭಾರ ವಹಿಸಿಕೊಂಡ ದಿ.30-06-03ರಿಂದ ಒಂದು ವರ್ಷದವರೆಗೆ ಅಥವಾ ಶ್ರೀಯುತರು ಸದರಿ ಹುದ್ದೆಯಲ್ಲಿ ಮುಂದುವರೆಯುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯನ್ನು ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರವರ ಹುದ್ದೆಗೆ ಉನ್ನತೀಕರಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂ.(2)ರ ದಿ.07-11-03ರ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು ಬೆಂಗಳೂರು ರವರು ಡಿಪಿಎಆರ್ 105 ಎಸ್‌ಪಿಎಸ್ 2003 ದಿನಾಂಕ:31-10-03 ರನ್ವಯ ಶ್ರೀ ಎಸ್.ಎನ್. ಬೋರ್ಕರ್ ಐಪಿಎಸ್, ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು ರವರನ್ನು ಪೊಲೀಸ್ ಮಹಾನಿರ್ದೇಶಕರು, ಸಿಓಡಿ, ಟ್ರೈನಿಂಗ್ ಸ್ಪೆಷಲ್ ಯೂನಿಟ್ಸ್ ಮತ್ತು ಎಕಾನಾಮಿಕ್ ಆಫೆನ್ಸಸ್, ಬೆಂಗಳೂರು ಇಲ್ಲಿಗೆ ವರ್ಗಾವಣೆ ಮಾಡಲಾಗಿದ್ದು, ಹಾಗೂ ಸದರಿ ಹುದ್ದೆಗೆ ಶ್ರೀ ವೈ. ಶೀಲದಾರಿರಾವ್, ಐಪಿಎಸ್ ರವರನ್ನು ಹೆಚ್ಚುವರಿ ಪೊಲೀಸ್ ಮಹಾನಿರ್ದೇಶಕರ ಹುದ್ದೆಯಿಂದ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು ಎಂದು ಬಡ್ತಿ ನೀಡಿ ಶ್ರೀ ಎಸ್.ಎನ್. ಬೋರ್ಕರ್ ಐಪಿಎಸ್ ಇವರ ಸ್ಥಳಕ್ಕೆ ವರ್ಗಾವಣೆ ಮಾಡಲಾಗಿದೆ. ಅದರಂತೆ ಸದರಿಯವರು ದಿನಾಂಕ 1-11-03ರ ಪೂರ್ವಾಹ್ನ ಕರ್ತವ್ಯಕ್ಕೆ ಹಾಜರಾಗಿರುವುದಾಗಿ ತಿಳಿಸಿರುತ್ತಾರೆ. ಶ್ರೀ ವೈ. ಶೀಲಧಾರಿರಾವ್, ಐಪಿಎಸ್ ರವರು ದಿನಾಂಕ 1-11-2003ರ ಪೂರ್ವಾಹ್ನದಂದು ಪೋಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕ ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯಲ್ಲಿ ಪ್ರಭಾರ ವಹಿಸಿಕೊಂಡದ್ದರಿಂದ ಸದರಿಯವರು ಹುದ್ದೆಯಲ್ಲಿ ಮುಂದುವರೆಯುವವರೆಗೆ ಅಥವಾ ಒಂದು ವರ್ಷದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆಯನ್ನು ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆ ಎಂದು ಸ್ಥಾನೋನ್ನತಿಗೊಳಿಸಿ ಮುಂದುವರೆಸುವಂತೆ ಸರ್ಕಾರದ ಆದೇಶವನ್ನು ಕೋರಿದ್ದಾರೆ.

ಮೇಲಿನ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂ. ಹೆಚ್‌ಡಿ 161 ಪಿಆರ್‌ಇ 2003, ಬೆಂಗಳೂರು, ದಿನಾಂಕ: 20ನೇ ಡಿಸೆಂಬರ್ 2003**

ಶ್ರೀ ವೈ. ಶೀಲಧಾರಿರಾವ್ ಐಪಿಎಸ್‌ರವರು ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರ ಹುದ್ದೆಯಲ್ಲಿ ಕರ್ತವ್ಯ ; ಪ್ರಭಾರ ವಹಿಸಿಕೊಂಡ ದಿನಾಂಕ 1-11-2003ರಿಂದ ಒಂದು ವರ್ಷದವರೆಗೆ ಅಥವಾ ಶ್ರೀಯುತರು ಸದರಿ ಹುದ್ದೆಯಲ್ಲಿ ಮುಂದುವರೆಯುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆಯನ್ನು ಪೊಲೀಸ್ ಮಹಾನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರ ಹುದ್ದೆ ಎಂದು ಉನ್ನತೀಕರಿಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ (ಜಿ.ಪಂ) ಟಿಪ್ಪಣಿ ಸಂ. ಆಇ 2470 ವೆ-6:2003, ದಿನಾಂಕ: 18-12-2003ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 366 **ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

**ವಿಷಯ:** ವಿಚಾರಣಾ ಬಂದಿಗಳನ್ನು ನ್ಯಾಯಾಲಯಗಳಿಗೆ ಹಾಜರುಪಡಿಸಲು ಪೊಲೀಸ್ ಬೆಂಗಾವಲು ಸಿಬ್ಬಂದಿಯನ್ನು ಮುಂದುವರೆಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 249 ಪಿಆರ್‌ಎ 2002, ದಿನಾಂಕ: 10-4-2003.
2. ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ: ಬೆಂ:ನ್ಯಾ.ವಿ:ಸಿಆರ್-18:02 ದಿನಾಂಕ: 16-9-2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 10-4-2003ರ ಆದೇಶದಲ್ಲಿ ವಿಚಾರಣಾ ಬಂದಿಗಳನ್ನು ನ್ಯಾಯಾಲಯಗಳಿಗೆ ಹಾಜರುಪಡಿಸಲು ಪೊಲೀಸ್ ಬೆಂಗಾವಲು ಒದಗಿಸುವ ಬಗ್ಗೆ ದಿನಾಂಕ: 20-11-2000 ರಂದು ಕಾರಾಗೃಹಗಳ ಇಲಾಖೆಗೆ ಮಂಜೂರಾಗಿರುವ ಪೊಲೀಸ್ ಬೆಂಗಾವಲು ಪಡೆಯ 627 ಹುದ್ದೆಗಳ ಅವಧಿಯನ್ನು ದಿನಾಂಕ: 20-11-2002 ರಿಂದ 21-11-2003ರ ವರೆಗೆ ತಾತ್ಕಾಲಿಕವಾಗಿ ಒಂದು ವರ್ಷದವರೆಗೆ ಮುಂದುವರೆಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ದಿನಾಂಕ: 16-9-2003ರ ಪತ್ರದಲ್ಲಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು ದಿನಾಂಕ:10-4-2003ರ ಆದೇಶದಲ್ಲಿ ವಿವಿಧ ವೃಂದ 627 ಹುದ್ದೆಗಳನ್ನು ದಿನಾಂಕ:21-11-2003ರವರೆಗೆ ತಾತ್ಕಾಲಿಕವಾಗಿ ಒಂದು ವರ್ಷದವರೆಗೆ ಮುಂದುವರೆಸಿದ್ದು, ಸದರಿ ಅವಧಿಯು ದಿನಾಂಕ: 21-11-2003ಕ್ಕೆ ಮುಗಿಯುವುದರಿಂದ ಸದರಿ 627 ಹುದ್ದೆಗಳನ್ನು ಮತ್ತೆರಡು ವರ್ಷಗಳ ಕಾಲ ಮುಂದುವರೆಸಲು ಹಾಗೂ ಬಂದಿ ಬೆಂಗಾವಲಿನ ಸಲುವಾಗಿ ಅಗತ್ಯವಿರುವ ವಾಹನ, ಕೈಕೊಳ, ಶಸ್ತ್ರಾಸ್ತ್ರಗಳನ್ನು ಪೊಲೀಸ್ ಇಲಾಖೆಯಿಂದ ತಾತ್ಕಾಲಿಕವಾಗಿ ಪಡೆದು ಕರ್ತವ್ಯ ನಿರ್ವಹಿಸಲು ಸರ್ಕಾರದ ನವೀಕೃತ ಆದೇಶವನ್ನು ಹೊರಡಿಸುವಂತೆ ಕೋರಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಹೆಚ್‌ಡಿ 249 ಪಿಆರ್‌ಎ 2002, ಬೆಂಗಳೂರು, ದಿನಾಂಕ: 10ನೇ ಡಿಸೆಂಬರ್ 2003**

ವಿಚಾರಣಾ ಬಂದಿಗಳನ್ನು ನ್ಯಾಯಾಲಯಗಳಿಗೆ ಹಾಜರುಪಡಿಸಲು ಪೊಲೀಸ್ ಬೆಂಗಾವಲು ಒದಗಿಸುವ ಬಗ್ಗೆ ದಿನಾಂಕ: 20-11-2000ರಂದು ಕಾರಾಗೃಹಗಳ ಇಲಾಖೆಗೆ ಮಂಜೂರಾಗಿರುವ ಪೊಲೀಸ್ ಬೆಂಗಾವಲು ಪಡೆಯ 627 ಹುದ್ದೆಗಳ ಅವಧಿಯನ್ನು ದಿನಾಂಕ: 22-11-2003 ರಿಂದ ದಿನಾಂಕ: 21-11-2004ರ ವರೆಗೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಒಸಾಇ 1124 ಅಂಆಸ 2003, ದಿನಾಂಕ: 10-11-2003ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 367 **ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## FOREST, ECOLOGY AND ENVIRONMENT SECRETARIAT

**Sub:** Measures to combat Air Pollution in Bangalore City.

**Read:**
1. G.O. No. FEE 120 ECO 2002 dated 02.12.2003
2. Letter No. KSPCB/25/CC/2004/581 dated 16.01.2004.
3. Gazetted Notification No. DEE 5 ECO 87 dated 30.5.1988.

**PREAMBLE:**

The Honorable Supreme Court of India on 14.08.2003 while dealing with Writ Petition No. 13029/85(Civil-PIL) (M.C. Mehta Vs Union of India & others) has observed alarming levels of pollution in 7 cities of the country including, among others, the Bangalore city. Further, it has also observed that the most critical form of pollution in Bangalore city is Respirable Suspended Particulate Matter (RSPM). The Honorable Supreme Court has directed that the State shall draw plan for lowering the rate of RSPM level in Bangalore City to be placed before the Environment Pollution (Prevention and Control) Authority.

Pursuant to the directions of the Hon'ble Supreme Court, the Government has issued G.O. No. FEE 120 ECO 2002 on 02.12.2003 (vide reference-2) with directions, among others, that Karnataka State Pollution Control Board (KSPCB) shall take action to promote use of cleaner fuels used by major industries in DG sets and boilers as a part of the approved Air Quality Improvement Action Plan for Bangalore City within Outer Ring Road limits of Bangalore.

High Speed Diesel (HSD) containing 0.05% sulphur is already being supplied within Outer Ring Road limits of Bangalore and the use of this cleaner HSD by industries in DG sets, plants (such as boilers etc) and other equipments would help further reduce sulphur emissions to a considerable extent thereby contributing to lesser air pollution.

The KSPCB (vide letter under reference-2) in view of the recommendation of the 153rd Board meeting on 26.12.2003, has requested the Government to notify under Section 19 of the Air (Prevention and Control of Pollution) Act, 1981 the use of High Speed Diesel (HSD) containing 0.05% Sulphur by industries (located in Bangalore agglomeration area) in Diesel Generator sets and other plants/equipments instead of HSD containing 0.25% Sulphur.

In exercise of powers under Section 19(1) of the Air (Prevention and Control of Pollution) Act, 1981 the Government has declared the entire state as air pollution control area (vide reference-3).

Under Section 19(3) of the Air (Prevention and Control of Pollution) Act, 1981 if the State Government, after consultation with the State Board, is of opinion that the use of any fuel, other than an approved fuel, in any air pollution control area or part thereof, may cause or is likely to cause air pollution, it may, by notification in the Official Gazette, prohibit the use of such fuel in such area or part thereof with effect from such as may be specified in the notification. Hence this Order.

**Government Order No. FEE 120 ECO 2002, Bangalore, Dated: 16th March 2004**

In the circumstances explained in the preamble and in exercise of the powers conferred under section 19(3) read with section 18 of the Air (Prevention and Control of Pollution) Act, 1981, the Government hereby directs the Karnataka State Pollution Control Board (KSPCB) to take all necessary steps to ensure mandatory use of High Speed Diesel (HSD) containing 0.05% sulphur (instead of HSD containing 0.25% sulphur) by industries located within Outer Ring Road limits of Bangalore in the following:

1. Diesel Generator sets (of capacity 5 KVA and above) and
2. Other plants/equipments (such as boilers etc where LDO/HSD is used as fuel).

This order comes into effect 3 months from the date of publication in the official gazette.

The KSPCB is required to furnish the action taken report to the Secretary, (Environment & Ecology), Forest, Ecology and Environment Department monthly.

By Order and in the name of the Governor of Karnataka,

P.R. 369 **V.R. GAIKWAD**

Under Secretary to Government, Forest, Ecology and Environment Department.

**CORRIGENDUM**

**No. FEE 33 FFM 2004, Bangalore, Dated: 10th March 2004**

**Sub:** Renewal of Mining lease No. 2160 in favour of M/s Veerabhadrappa Sangappa and Company for Iron Ore mines to an extent of 19.90 ha. in R.M.Block, Sandur Taluk, Bellary District.

**Ref:** 1. Govt. Order No. FEE 96 FFM 2003, dated: 05.01.2004.
2. Letter No.A5(1)MNG.CR.119/88-89, dated: 12.2.2004 of the Principal Chief Conservator of Forests Bangalore.

In Government Order No. FEE 96 FFM 2003, dated 05.01.2004 referred at (1) above issued in favour of M/s Veerabhadrappa Sangappa and Company for renewal of mining lease No.2160 in R.M.Block, Sandur Taluk, Bellary District following condition No. 15 is hereby deleted:-

"The lessee shall deposit the amount at prevailing rate towards raising of compensatory afforestation over 3.00 ha. in non-forest land".

By Order and in the name of the Governor of Karnataka,

P.R. 370 **S.R. VATSALA**

Under Secretary to Government, Forest, Ecology and Environment Department.

**HOME AND TRANSPORT SECRETARIAT**

**Sub:** Appointment of Controller of Civil Defence, Bangalore City.

**Read:** Letter No. D.O.No. CD (1) 30/DCD/99-2000, dated: 20-9-2003 of Director General of Police Commandant General, Home Guards and Director of Civil Defence.

**PREAMBLE:**

The Commandant General in his letter dated 20-9-2003 read above his stated that the Ministry of Home Affairs, Government of India Director General of Civil Defence (CD) Section, New Delhi and their letter No. VIII-11011-41/98 DGCD(CD) dated: 3-6-99 has categorised Mallapur of Uttarkannada and Shakthinagar, Raichur District as Category-2 Civil Defence towns. In view of this, the responsibilities and Jurisdiction of Controller of Civil Defence, Bangalore City who is also the Director of Civil Defence, Karnataka State have increased considerably. He has further stated that all efforts are to be made to implement Civil Defence measures in all Civil Defence Towns in the state with the available resources and therefore it is felt necessary to appoint the Commissioner of Police, Bangalore City as the controller of Civil Defence, Bangalore City in terms of sub-section (1) of section 4 of Civil Defence Act, 1968. The proposal of the Commandant General, Home Guards and Director of Civil Defence has been examined by the Government and the following orders are issued.

**Government Order No. HD 92 SGH 2003, Bangalore, Dated: 23rd December 2003**

In exercise of the powers conferred under sub-section (1) of section 4 of the Civil Defence Act, 1968, the State Government hereby appoints the Commissioner of Police, Bangalore City as controller of civil Defence, Bangalore City with immediate effect and until further order.

By Order and in the name of the Governor of Karnataka,

**S. RAJU**

I/c, Under Secretary to Government,

Home and Transport Department, (Police Auxillary Services)

P.R. 371

**ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ**

**ವಿಷಯ:** ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ನಿರ್ಜೀವ ಮತ್ತು ಒಣಗಿದ ಬೊಂಬುಗಳನ್ನು ಸರಬರಾಜು ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಅಪಜೀ 51 ಎಫ್‌ಡಿಪಿ 2001 ದಿನಾಂಕ 11-03-2003.
2. ಸರ್ಕಾರದ ಆದೇಶ ಸಂಖ್ಯೆ ಅಪಜೀ 51 ಎಫ್‌ಡಿಪಿ 2001 ದಿನಾಂಕ 27-01-2004.
3. ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತ ಇದರ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಎಂಪಿಎಂ/017/ಎಂಡಿ.03./651 ದಿನಾಂಕ 07-01-2004 ಮತ್ತು ದಿನಾಂಕ 26-02-2004ರ ಪತ್ರಗಳು.
4. ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆ.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕೊಪ್ಪ, ಚಿಕ್ಕಮಗಳೂರು, ಭದ್ರಾವತಿ, ಶಿವಮೊಗ್ಗ, ಸಾಗರ, ಹುಣಸೂರು ಮತ್ತು ಬೆಂಗಳೂರು ವಿಭಾಗಗಳಲ್ಲಿನ ಒಣಗಿದ ಹಾಗೂ ನಿರ್ಜೀವ ಬೊಂಬುಗಳನ್ನು 2002-03 ಮತ್ತು 2003-04ನೇ ಸಾಲುಗಳಲ್ಲಿ ತೆಗೆದು ಭದ್ರಾವತಿಯಲ್ಲಿರುವ ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಸರಬರಾಜು ಮಾಡಲು ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತ, ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಹಾಗೂ ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಗಳಿಗೆ ಮಂಜೂರಾತಿ ನೀಡಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಅರಣ್ಯಗಳಲ್ಲಿ ಲಭ್ಯವಿರುವ ನಿರ್ಜೀವ ಬೊಂಬುಗಳನ್ನು ಆದಷ್ಟು ಬೇಗನೆ ತೆಗೆಯುವ ಸಲುವಾಗಿ ಅರಣ್ಯಗಳಿಂದ ನಿರ್ಜೀವ ಮತ್ತು ಹೂ ಬಿಟ್ಟ ಬೊಂಬುಗಳನ್ನು ಕಡಿತಲೆ ಮಾಡಿ ಅದನ್ನು ಹೊರರಾಜ್ಯಗಳಲ್ಲಿನ ಕೈಗಾರಿಕೆಗಳಿಗೆ ಒದಗಿಸಲು ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಮತ್ತು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಗಳಿಗೆ ಅನುಮತಿಯನ್ನು ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತ, ಇವರು 2002-03 ಮತ್ತು 2003-04ನೇ ಸಾಲುಗಳಲ್ಲಿ ಮಾಡಿದ್ದ ಹಂಚಿಕೆಯು ದಿನಾಂಕ 31-03-2004ಕ್ಕೆ ಮುಕ್ತಾಯಗೊಳ್ಳಲಿದ್ದು 2004-05ನೇ ಸಾಲಿಗೆ ಹಂಚಿಕೆ ಮಾಡುವಾಗ ಭದ್ರಾವತಿಗೆ ಸಮೀಪವಿರುವ ಪ್ರದೇಶಗಳಾದ ಭದ್ರಾವತಿ, ಕೊಪ್ಪ ಮತ್ತು ಚಿಕ್ಕಮಗಳೂರು ವಿಭಾಗಗಳನ್ನು ಆದ್ಯತೆಯ ಮೇರೆಗೆ ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಹಂಚಿಕೆ ಮಾಡುವಂತೆ ಕೋರಿರುವರು.

ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಮತ್ತು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಗಳಿಗೆ ಹೊರರಾಜ್ಯಗಳ ಕೈಗಾರಿಕೆಗಳಿಗೆ ಸರಬರಾಜು ಮಾಡಲು ಈಗಾಗಲೇ ಬದ್ಧವಾಗಿರುವಂತೆ ಅನುಕ್ರಮವಾಗಿ 5000 ಮೆ.ಟನ್ ಮತ್ತು 7,000 ಮೆ.ಟನ್‌ಗಳಷ್ಟು ಬೊಂಬನ್ನು ಜೂನ್ 2004 ರವರೆಗೆ ಕೊಪ್ಪ ವಿಭಾಗದಿಂದ ಕಟಾಯಿಸಿ ಸರಬರಾಜು ಮಾಡಲು ಅನುಮತಿ ನೀಡುವಂತೆ ಹಾಗೂ ಲಭ್ಯತೆಗನುಗುಣವಾಗಿ ಆದ್ಯತೆಯ ಮೇರೆಗೆ ಕೊಪ್ಪ ವಿಭಾಗದಿಂದ 25,000 ಮೆ.ಟನ್‌ನಷ್ಟು ಒಣಗಿದ ಮತ್ತು ಹೂ ಬಿಟ್ಟ ಬೊಂಬನ್ನು ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಸರಬರಾಜು ಮಾಡಲು ದಿನಾಂಕ 8.3.2004 ರಂದು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಲಾಗಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಅಪಜೀ 11 ಎಫ್‌ಡಿಪಿ 2004, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2004**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಅರಣ್ಯ ಕೈಗಾರಿಕಾ ನಿಗಮ ನಿಯಮಿತ ಮತ್ತು ಕರ್ನಾಟಕ ಅರಣ್ಯ ಅಭಿವೃದ್ಧಿ ನಿಗಮ ನಿಯಮಿತಗಳಿಗೆ ಈಗಾಗಲೇ ಬದ್ಧವಾಗಿರುವಂತೆ ಕೊಪ್ಪ ವಿಭಾಗದಿಂದ ಅನುಕ್ರಮವಾಗಿ 5,000 ಮೆ.ಟನ್ ಮತ್ತು 7000 ಮೆ.ಟನ್‌ನಷ್ಟು ಬೊಂಬನ್ನು ಕಟಾಯಿಸಿ ಒದಗಿಸಲು ಜೂನ್ 2004 ರವರೆಗೆ ಅನುಮತಿ ನೀಡಲಾಗಿದೆ.

ಮುಂದುವರೆದು, ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಒದಗಿಸಲು ಕೊಪ್ಪ ವಿಭಾಗದಲ್ಲಿ ಸುಮಾರು 25,000 ಮೆ.ಟನ್‌ನಷ್ಟು ಒಣಗಿದ ಮತ್ತು ಹೂಬಿಟ್ಟ ಬೊಂಬು ಲಭ್ಯತೆಯಿರುವ ಸಾಧ್ಯತೆ ಇದ್ದು, ಇದನ್ನು ಆದ್ಯತೆಯ ಮೇರೆಗೆ ಲಭ್ಯತೆಗೊಳಪಟ್ಟು ಮೆ: ಮೈಸೂರು ಕಾಗದ ಕಾರ್ಖಾನೆ ನಿಯಮಿತಕ್ಕೆ ಒದಗಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಸಂಬಂಧ ನಿಗಮಗಳು ಕಡಿತಲೆ ದರ ಟನ್ ಒಂದಕ್ಕೆ ರೂ.500/- (ಐದು ನೂರು ರೂಪಾಯಿಗಳು ಮಾತ್ರ)ನ್ನು ಇತರ ತೆರಿಗೆಗಳೊಂದಿಗೆ ಸರ್ಕಾರಕ್ಕೆ ಪಾವತಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 372

**ಕೆ.ವಿ. ಜಯಲಕ್ಷ್ಮಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ.

**ಶಿಕ್ಷಣ ಸಚಿವಾಲಯ**

**ವಿಷಯ:** ಬೆಂಗಳೂರು ವಿಶ್ವವಿದ್ಯಾಲಯದ ಸಂಶೋಧನಾ ಸಹಾಯಕರುಗಳಾದ ಡಾ: ಪಿ. ರಾಮಣ್ಣ ಮತ್ತು ಶ್ರೀ ಎಂ. ಮುನಿರಾಜಪ್ಪ ಅವರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನೀಕರಣದ ಕುರಿತು.

**ಓದಲಾಗಿದೆ:**

1. ದಿನಾಂಕ: 31-03-1999 ಸಂಖ್ಯೆ: ಇಡಿ 303 ಯುಬಿವಿ 1998ರ ಸರ್ಕಾರಿ ಆದೇಶ.
2. ದಿನಾಂಕ: 25-07-1999 ಸಂ: ಇಎಸ್‌ಟಿ II/ಇ9/ಎಪಿಟಿ/ಎಲ್/ಹೆಚ್‌ಐಎಸ್/ಎಂಎಂ/933/1998-99ರ ಬೆಂಗಳೂರು ವಿಶ್ವವಿದ್ಯಾಲಯದ ಪತ್ರ.
3. ದಿನಾಂಕ: 17-07-2000, 07-09-2000 ಮತ್ತು 05-10-2000ರ ಸಂ. ಇಡಿ 303 ಯುಬಿವಿ 1998ರ ಸರ್ಕಾರಿ ಪತ್ರಗಳು.
4. ದಿನಾಂಕ: 24-10-2000 ಸಂಖ್ಯೆ: ಇಎಸ್‌ಟಿ II/ಇ9/ಎಪಿಟಿ/ಎಲ್/ಹೆಚ್‌ಐಎಸ್/ಎಂಎಂ/933/1998-99ರ ಬೆಂಗಳೂರು ವಿಶ್ವವಿದ್ಯಾಲಯದ ಪತ್ರ.
5. ದಿನಾಂಕ: 09-12-2003 ಸಂಖ್ಯೆ: ಇಎಸ್‌ಟಿ II/ಇ9/ಎಪಿಟಿ/ಎಲ್/ಹೆಚ್‌ಐಎಸ್/ಎಂಎಂ/933/1998-99ರ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳ ಪತ್ರ.

**ಪೀಠಿಕೆ:**

1) ದಿನಾಂಕ: 28-09-1998 ರಂದು ನಡೆದ ಸಿಂಡಿಕೇಟಿನ ಸಭೆಯಲ್ಲಿ ಬೆಂಗಳೂರು ವಿಶ್ವವಿದ್ಯಾಲಯದ ಇತಿಹಾಸ ಹಾಗೂ ರಾಜ್ಯಶಾಸ್ತ್ರದ ಸಂಶೋಧನಾ ಸಹಾಯಕರುಗಳಾದ ಶ್ರೀ ಎಂ. ಮುನಿರಾಜಪ್ಪ ಮತ್ತು ಶ್ರೀ ಪಿ. ರಾಮಣ್ಣ ಸಂಶೋಧನಾ ಸಹಾಯಕರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನೀಕರಣಗೊಳಿಸುವುದಕ್ಕೆ ಸಂಬಂಧಿಸಿದಂತೆ ಅನುಶಾಸನದನ್ವಯ ಎನ್‌ಇಟಿ/ಎಸ್‌ಎಲ್‌ಇಟಿಯನ್ನು ಮೂರು ವರ್ಷಗಳ ಅವಧಿಯಲ್ಲಿ ಪೂರ್ಣಗೊಳಿಸಬೇಕೆಂದು, ಇಲ್ಲದಿದ್ದಲ್ಲಿ ಭವಿಷ್ಯದ ವಾರ್ಷಿಕ ಬಡ್ತಿಗಳನ್ನು ಸ್ಥಗಿತಗೊಳಿಸಲಾಗುವುದೆಂಬ ಷರತ್ತುಗಳಿಗೊಳಪಟ್ಟು ಉಪನ್ಯಾಸಕರುಗಳನ್ನಾಗಿ ವಿಲೀನೀಕರಣಗೊಳಿಸಲು ನಿರ್ಣಯಿಸಿತ್ತು. ಎನ್‌ಇಟಿಯನ್ನು ಪಾಸು ಮಾಡಿರದ ಸಂಶೋಧನಾ ಸಹಾಯಕರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನೀಕರಣಗೊಳಿಸಲು ಅವಕಾಶವಿಲ್ಲವಾದ್ದರಿಂದ ಸಿಂಡಿಕೇಟಿನ ಈ ನಿರ್ಣಯವನ್ನು ಕಾರ್ಯಗತಗೊಳಿಸಬಾರದೆಂದು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ತಿಳಿಸಲಾಯಿತು. ಅದಕ್ಕೆ ಉತ್ತರವಾಗಿ ಬೆಂಗಳೂರು ವಿಶ್ವವಿದ್ಯಾಲಯವು ದಿನಾಂಕ: 25-09-1998ರಂದು ಈಗಾಗಲೇ ಅವರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನೀಕರಣಗೊಳಿಸಿ ಆದೇಶ ಹೊರಡಿಸಿರುವುದಾಗಿ ತಿಳಿಸಿತ್ತು. ಆದ್ದರಿಂದ ಸಿಂಡಿಕೇಟಿನ ನಿರ್ಣಯ ಹಾಗೂ ಸದರಿ ನಿರ್ಣಯದ ಆಧಾರದ ಮೇಲೆ ಹೊರಡಿಸಲಾದ ಆದೇಶವನ್ನು ಏಕೆ ರದ್ದುಪಡಿಸಬಾರದು ಎಂಬುದಕ್ಕೆ ವಿವರಣೆಯನ್ನು ಕೇಳಿ ಕೆ.ಎಸ್.ಯು ಅಧಿನಿಯಮ 1976ರ 8(8)ನೇ ಪ್ರಕರಣದಡಿ ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಷೋಕಾಸ್ ನೋಟೀಸ್ ನೀಡಲಾಯಿತು.

2) ಬೆಂಗಳೂರು ವಿಶ್ವವಿದ್ಯಾಲಯ ಇದಕ್ಕೆ ಉತ್ತರ ನೀಡಿ ಮೇಲ್ಕಂಡ ಸಂಶೋಧನಾ ಸಹಾಯಕರುಗಳ ವಿಲೀನೀಕರಣಕ್ಕೆ ಸಂಬಂಧಿಸಿದಂತೆ 1993ರಿಂದ ಪತ್ರ ವ್ಯವಹಾರ ನಡೆದಿದ್ದು, ಅಂತಿಮವಾಗಿ ದಿನಾಂಕ: 21-04-1998ರ ಪತ್ರದಲ್ಲಿ ಅನುಶಾಸನಕ್ಕೆ ಅಂಕಿತವನ್ನು ನೀಡಲಾಗಿದೆ. ಅವರ ಪ್ರಕರಣಗಳನ್ನು ನೇಮಕಾತಿ ಮಂಡಳಿಗಳು ಪರಿಗಣಿಸಿದ್ದು, ಅನುಶಾಸನದ ಉಪಬಂಧಗಳು, ಅದರಲ್ಲಿರುವ ಷರತ್ತುಗಳು, ಯುಜಿಸಿ ಮಾರ್ಗಸೂಚಿಗಳು ಮತ್ತು ಅವರ ಶೈಕ್ಷಣಿಕ ಹಿನ್ನೆಲೆ ಇತ್ಯಾದಿ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಅವರುಗಳ ವಿಲೀನೀಕರಣಕ್ಕೆ ಶಿಫಾರಸ್ಸು ಮಾಡಿದ್ದವು. ಈ ಶಿಫಾರಸ್ಸನ್ನು ಸಿಂಡಿಕೇಟು ಸಹ ಒಪ್ಪಿಕೊಂಡಿತ್ತು. ಅದರಂತೆ ಅವರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನೀಕರಣಗೊಳಿಸಿ ಆದೇಶ ಹೊರಡಿಸಲಾಗಿದೆ. ಅವರುಗಳು ಕರ್ತವ್ಯಕ್ಕೆ ಹಾಜರಾಗಿದ್ದಾರೆ. ಅವರುಗಳು ದೀರ್ಘ ಕಾಲದಿಂದ ಸಂಶೋಧನಾ ಸಹಾಯಕರುಗಳಾಗಿ ಸೇವೆ ಸಲ್ಲಿಸುತ್ತಿರುವುದರಿಂದ ಅವರ ಅನುಭವವನ್ನು ಗಮನದಲ್ಲಿಟ್ಟುಕೊಂಡು ಸಿಂಡಿಕೇಟಿನ ನಿರ್ಣಯ ಹಾಗೂ ಸದರಿ ನಿರ್ಣಯದ ಮೇಲೆ ಹೊರಡಿಸಿದ ಆದೇಶವನ್ನು ರದ್ದುಪಡಿಸಬಾರದೆಂದು ಕೋರಿತ್ತು. ಬೆಂಗಳೂರು ವಿಶ್ವವಿದ್ಯಾಲಯ ನೀಡಿದ ವಿವರಣೆ ತೃಪ್ತಿಕರವಾಗಿರಲಿಲ್ಲವಾದ್ದರಿಂದ ದಿನಾಂಕ: 31-03-1999 ಸಂ. ಇಡಿ 303 ಯುಬಿವಿ 1998ರ ಸರ್ಕಾರಿ ಆದೇಶದಲ್ಲಿ ದಿನಾಂಕ: 21-09-1998ರ ಸಿಂಡಿಕೇಟಿನ ನಿರ್ಣಯ ಹಾಗೂ ಅದರ ಆಧಾರದ ಮೇಲೆ ಶ್ರೀ ಎಂ. ಮುನಿರಾಜಪ್ಪ ಮತ್ತು ಶ್ರೀ ಪಿ. ರಾಮಣ್ಣ, ಸಂಶೋಧನಾ ಸಹಾಯಕರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನೀಕರಣಗೊಳಿಸಿದ ಆದೇಶವನ್ನು ಕೆ.ಎಸ್.ಯು. ಅಧಿನಿಯಮ 1976ರ 8(8)ನೇ ಪ್ರಕರಣದಡಿ ರದ್ದುಪಡಿಸಲಾಯಿತು.

3) ದಿನಾಂಕ: 31-03-1999ರ ಆದೇಶವನ್ನು ಜಾರಿಗೊಳಿಸಲು ಬೆಂಗಳೂರು ವಿಶ್ವವಿದ್ಯಾಲಯಕ್ಕೆ ಪದೇ ಪದೇ ನಿರ್ದೇಶನ ನೀಡಲಾಗಿದ್ದರೂ ಅವರುಗಳು ಸಲ್ಲಿಸಿರುವ ದೀರ್ಘ ಸೇವೆ, ಡಾ: ಪಿ. ರಾಮಣ್ಣ ಪಿ.ಹೆಚ್.ಡಿ ಹೊಂದಿದ್ದು, ಅಂಗವಿಕಲರೂ ಸಹ ಆಗಿರುವುದರಿಂದ ಮತ್ತು ಇಬ್ಬರೂ ಪರಿಶಿಷ್ಟ ಜಾತಿಗೆ ಸೇರಿರುವುದರಿಂದ ನಿರ್ಣಯವನ್ನು ಪುನರ್ ಪರಿಗಣಿಸುವಂತೆ ಸರ್ಕಾರವನ್ನು ಒತ್ತಾಯಿಸಿತ್ತು. ಒಂದು ಹಂತದಲ್ಲಿ ಬೆಂಗಳೂರು ವಿಶ್ವವಿದ್ಯಾಲಯ ಅವರ ನೇಮಕಾತಿಯನ್ನು ಬ್ಯಾಕ್‌ಲಾಗ್ ಹುದ್ದೆಗಳಲ್ಲಿ ಪರಿಗಣಿಸಬೇಕೆಂದು ಸಹ ಶಿಫಾರಸ್ಸು ಮಾಡಿತ್ತು. ವಿಧಾನ ಮಂಡಲದ ಅಧೀನ ಶಾಸನ ಸಮಿತಿಯ ಮುಂದೆ ಈ ವಿಷಯ ಚರ್ಚೆಗೆ ಬಂದಿದ್ದು, ಸದರಿ ಸಮಿತಿಯು ಸಹ ಇವರ ಪ್ರಕರಣವನ್ನು ಸಹಾನುಭೂತಿಯಿಂದ ಪರಿಗಣಿಸಬೇಕೆಂದು ಶಿಫಾರಸ್ಸು ಮಾಡಿತ್ತು. ಇತ್ತೀಚೆಗೆ ಬೆಂಗಳೂರು ವಿಶ್ವವಿದ್ಯಾಲಯದ ಕುಲಪತಿಗಳು 22 ಮತ್ತು 4 ತಾತ್ಕಾಲಿಕ ಉಪನ್ಯಾಸಕರ ಸೇವೆಯನ್ನು ಸಕ್ರಮಗೊಳಿಸಿದ್ದ ಆದೇಶವನ್ನು ರದ್ದುಪಡಿಸಿರುವುದನ್ನು ಹಿಂತೆಗೆದುಕೊಂಡಿರುವ ಹಿನ್ನೆಲೆಯಲ್ಲಿ ಈ ಇಬ್ಬರು ಉಪನ್ಯಾಸಕರುಗಳ ಪ್ರಕರಣವನ್ನು ಸಹ ಪುನರ್ ಪರಿಗಣಿಸಲು ಕೋರಿದ್ದಾರೆ.

4) ವಿಲಿನೀಕರಣಗೊಂಡ ಉಪನ್ಯಾಸಕರುಗಳಿಬ್ಬರೂ ಪಿ.ಹೆಚ್.ಡಿ ಪಡೆದಿರುವ ಬೆಳಕಿನಲ್ಲಿ ಈ ಪ್ರಕರಣವನ್ನು ಪುನರ್ ಪರಿಶೀಲಿಸಲಾಗಿದೆ. ಯುಜಿಸಿಯು University Grants Commission (minimum Qualifications required for the appointment and Carrer Advancement of teachers in Universities and institutions affiliated to it) (Ist Amendment) Regulation 2002ನ್ನು 31-07-2002ರಂದು ಪ್ರಕಟಿಸಿದ್ದು, ಅದರಲ್ಲಿ ಈ ಕೆಳಕಂಡ ಉಪಬಂಧವನ್ನು ಅಳವಡಿಸಲಾಗಿದೆ.

> "NET shall remain the compulsory requirement for appointment as lecturer even for candidates having Ph.D degree. However, the candidates who have completed M.Phil degree by 31st December, 1993 or have submitted PhD, thesis to the University in the concerned subject on or before 31st December , 2002 are exempted from appearing in the NET examination. In case such candidates fail to obtain PhD., degree they shall have to pass the NET examination."

ದಿನಾಂಕ:01-01-1996ರಿಂದ ಯುಜಿಸಿ ಪರಿಷ್ಕೃತ ವೇತನ ಶ್ರೇಣಿ ಅಥವಾ ಇತರ ಸೌಲಭ್ಯಗಳನ್ನು ವಿಸ್ತರಿಸಲು ಹೊರಡಿಸಲಾದ ಯುಜಿಸಿ ಅಧಿಸೂಚನೆ-1998ರಲ್ಲಿ ಪಿ.ಹೆಚ್‌ಡಿ., ಹೊಂದಿದವರಿಗೆ ಎನ್‌ಇಟಿ/ಎಸ್‌ಎಲ್‌ಇಟಿ ತೇರ್ಗಡೆ ಹೊಂದುವುದರಿಂದ ವಿನಾಯಿತಿ ನೀಡಲು ವಿಶ್ವವಿದ್ಯಾಲಯಗಳೇ ಅಧಿಕಾರ ಹೊಂದಿದ್ದವು. ಈ ಎಲ್ಲಾ ಬೆಳವಣಿಗೆಗಳು ಹಾಗೂ ಸಂಶೋಧನಾ ಸಹಾಯಕರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನಗೊಳಿಸುವ ಅನುಶಾಸನದ ಉಪಬಂಧಗಳ ಬೆಳಕಿನಲ್ಲಿ ಪರಿಗಣಿಸಿ ಬೆಂಗಳೂರು ವಿಶ್ವವಿದ್ಯಾಲಯವೇ ಒಂದು ನಿರ್ಣಯ ತೆಗೆದುಕೊಳ್ಳುವುದು ಉಚಿತವಾಗಿದೆ. ಈ ಹಿನ್ನೆಲೆಯಲ್ಲಿ ದಿನಾಂಕ: 31-03-1999 ಸಂಖ್ಯೆ ಇಡಿ 303 ಯುಬಿವಿ 1998ರ ಸರ್ಕಾರಿ ಆದೇಶವನ್ನು ಹಿಂತೆಗೆದುಕೊಳ್ಳುವ ಪ್ರಸ್ತಾವನೆಯನ್ನು ಪರಿಗಣಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 02 ಯುಬಿವಿ 2004, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2004**

5) ಪೀಠಿಕೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ, ಸಂಶೋಧನಾ ಸಹಾಯಕರುಗಳಾಗಿ ಸೇವೆ ಸಲ್ಲಿಸುತ್ತಿದ್ದ ಡಾ: ಪಿ. ರಾಮಣ್ಣ ಮತ್ತು ಎಂ. ಮುನಿರಾಜಪ್ಪ ಇವರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನಗೊಳಿಸಿದ್ದ ಬೆಂಗಳೂರು ವಿಶ್ವವಿದ್ಯಾಲಯದ ಸಿಂಡಿಕೇಟಿನ ನಿರ್ಣಯ ಮತ್ತು ಆದೇಶವನ್ನು ರದ್ದುಪಡಿಸಿರುವ ದಿನಾಂಕ: 31-03-1999ರ ಸಂಖ್ಯೆ ಇಡಿ 303 ಯುಬಿವಿ 98ರ ಸರ್ಕಾರಿ ಆದೇಶವನ್ನು ಹಿಂತೆಗೆದುಕೊಳ್ಳಲಾಗಿದೆ. ಸಂಶೋಧನಾ ಸಹಾಯಕರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನಗೊಳಿಸುವುದಕ್ಕೆ ಸಂಬಂಧಿಸಿದ ಅನುಶಾಸನದಲ್ಲಿನ ಉಪಬಂಧಗಳು ಹಾಗೂ ಅವರಿಬ್ಬರೂ ಪಿ.ಹೆಚ್‌ಡಿ ಪಡೆದಿರುವುದು, ದಿನಾಂಕ: 31-07-2002ರ ಅಧಿಸೂಚನೆಯಲ್ಲಿ ಯುಜಿಸಿ ನೀಡಿರುವ ವಿನಾಯಿತಿಯಂತಹ ನಂತರದ ಬೆಳವಣಿಗೆಗಳು ಹಾಗೂ ಈ ವಿಷಯದಲ್ಲಿ ಸೂಕ್ತ ನಿರ್ಣಯ ತೆಗೆದುಕೊಳ್ಳಲು ಅಗತ್ಯವಾದ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಈ ಇಬ್ಬರೂ ಸಂಶೋಧನಾ ಸಹಾಯಕರುಗಳನ್ನು ಉಪನ್ಯಾಸಕರುಗಳನ್ನಾಗಿ ವಿಲೀನಗೊಳಿಸುವ ವಿಷಯದಲ್ಲಿ ಬೆಂಗಳೂರು ವಿಶ್ವವಿದ್ಯಾಲಯವೇ ಸೂಕ್ತ ನಿರ್ಣಯ ತೆಗೆದುಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 373

**ಸುಂದರ ರಾಜ ಗುಪ್ತ**

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ).

## ಒಳಾಡಳಿತ ಮತ್ತು ಸಾರಿಗೆ ಸಚಿವಾಲಯ

**ವಿಷಯ:** ದಿನಾಂಕ ೨-೧-೧೯೯೮ ರಂದು ರಾತ್ರಿ ಮಂಗಳೂರು ಜಿಲ್ಲಾ ಕಾರಾಗೃಹದಲ್ಲಿನ ೫ ಜನ ಬಂದಿಗಳು ಪರಾರಿಯಾದ ಬಗ್ಗೆ - ಲೋಕಾಯುಕ್ತರಿಂದ ಜಂಟಿ ಇಲಾಖಾ ವಿಚಾರಣೆ ಕುರಿತು ಕಡ್ಡಾಯ ನಿವೃತ್ತಿಗೊಳಿಸುವ ಆದೇಶ.

**ಓದಲಾಗಿದೆ:**

೧. ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾನಿರೀಕ್ಷಕರು, ಬೆಂಗಳೂರು ರವರ ಪತ್ರ ಸಂಖ್ಯೆ:ವಿಚಾರಣೆ:ಸಿಆರ್-೩೫:೯೮ ದಿನಾಂಕ ೬-೩-೧೯೯೮.

೨. ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ ೩೩ ಪಿಆರ್‌ಇ ೯೮, ದಿನಾಂಕ ೧೪-೫-೯೮.

೩. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ:ಎಂಐಎಸ್:ಲೋಕ:ಎಂವೈಎಸ್:ಜಿಇಎಸ್:೬೬೨:೯೮-೯೯, ದಿನಾಂಕ ೨೩-೬-೧೯೯೮

೪. ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ ೩೩ ಪಿಆರ್‌ಇ ೯೮, ದಿನಾಂಕ ೧೩-೭-೯೮

೫. ಸರ್ಕಾರಿ ಪತ್ರ ಸಂಖ್ಯೆ:ಹೆಚ್‌ಡಿ ೩೩ ಪಿಆರ್‌ಇ ೯೮, ದಿನಾಂಕ ೧೪-೧೨-೯೮

೬. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ:ಕಂಪ್ಲೇಂಟ್:ಉಪಲೋಕಾ:ಮೈ:೨೨೬:೯೮-೯೯:ಲೋಕ:ಐಎನ್‌ವಿ(ಜಿ)ಎಂಜಿ-೧೪:೯೯ ದಿ:೨೭-೫-೨೦೦೦

೭. ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ ೩೩ ಪಿಆರ್‌ಇ ೯೮, ದಿನಾಂಕ:೩೦-೮-೨೦೦೦
೮. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ:ಕಂಪ್ಲೇಂಟ್:ಉಪಲೋಕಾ:ಮೈ:೨೨೬:೯೮-೯೯: ಡಿಆರ್‌ಇ-೨, ದಿನಾಂಕ ೨೬-೯-೨೦೦೦
೯. ತಿದ್ದುಪಡಿ ಆದೇಶ ಸಂಖ್ಯೆ:ಹೆಚ್‌ಡಿ ೩೩ ಪಿಆರ್‌ಇ ೯೮,ದಿನಾಂಕ ೨೪-೧೦-೨೦೦೦
೧೦. ಕರ್ನಾಟಕ ಉಪ ಲೋಕಾಯುಕ್ತರವರ ಆದೇಶ ಸಂಖ್ಯೆ:ಲೋಕ್:ಐಎನ್‌ಕ್ಯೂ:೧೦೬:೧೪-ಎ:೨೦೦೦-೨೦೦೧, ದಿನಾಂಕ ೭-೧೨-೨೦೦೦.
೧೧. ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ:ಲೋಕ:ಎಆರ್‌ಇ-೩:ಇಎನ್‌ಕ್ಯೂ-೧೦: ೨೦೦೧-೦೨, ದಿನಾಂಕ ೧-೧-೨೦೦೩
೧೨. ಸರ್ಕಾರದ ಷೋಕಾಸ್ ನೋಟೀಸ್ ಸಂಖ್ಯೆ:ಹೆಚ್‌ಡಿ ೩೩ ಪಿಆರ್‌ಇ ೯೮, ದಿನಾಂಕ ೩೧-೧-೨೦೦೩.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ(೧)ರ ದಿನಾಂಕ೬-೩-೧೯೯೮ರ ಪತ್ರದಲ್ಲಿ ಹೆಚ್ಚುವರಿ ಪೋಲೀಸ್ ಮಹಾ ನಿರ್ದೇಶಕರು ಮತ್ತು ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ರವರು ಮಂಗಳೂರು ಜಿಲ್ಲಾ ಕಾರಾಗೃಹದಿಂದ ದಿನಾಂಕ ೨-೧-೯೮ ರಂದು ರಾತ್ರಿ ಈ ಕೆಳಕಂಡ ಬಂದಿಗಳು ಪರಾರಿಯಾಗಿದ್ದು, ಇದಕ್ಕೆ ಸಂಬಂಧಿಸಿದಂತೆ ಗುಲ್ಬರ್ಗಾ ಕೇಂದ್ರ ಕಾರಾಗೃಹದ ಅಧೀಕ್ಷಕರಾದ ಶ್ರೀ ಎಂ.ಜಿ. ತಾವರ್‌ಖೇಡ್ ರವರು ಪ್ರಾರಂಭಿಕ ತನಿಖೆ ನಡೆಸಿ ದಿನಾಂಕ ೧೭-೧-೯೮ ರಂದು ವರದಿಯನ್ನು ಸಲ್ಲಿಸಿ ರುವುದಾಗಿ ತಿಳಿಸಿರುತ್ತಾರೆ.

೧) ಸಜಾ ಬಂದಿ ಸಂಖ್ಯೆ ೭೨೫೨ ದಿವಾಕರ್
೨) ಸಜಾ ಬಂದಿ ಸಂಖ್ಯೆ ೭೨೫೦ ಲಕ್ಷ್ಮಣ ಪೂಜಾರಿ
೩) ಸಜಾ ಬಂದಿ ಸಂಖ್ಯೆ ೭೨೪೯ ಸಿ.ಗೋವಿಂದನ್
೪) ವಿಚಾರಣಾ ಬಂದಿ ಸಂಖ್ಯೆ ೧೧೮೭೪ ರಚರ್ಡ್ ಸ್ಟೀಪನ್ ಟೈಲರ್
೫) ವಿಚಾರಣಾ ಬಂದಿ ಸಂಖ್ಯೆ ೧೧೭೭೦ ಆಶ್ರಫ್

ಪ್ರಾರಂಭಿಕ ವಿಚಾರಣಾ ವರದಿಯಲ್ಲಿ ಮೇಲಿನ ಬಂದಿಗಳು ಪರಾರಿಯಾಗಿರುವುದಕ್ಕೆ ಈ ಕೆಳಕಂಡ ಸಿಬ್ಬಂದಿಗಳ ಕರ್ತವ್ಯ ಲೋಪ ಹಾಗೂ ೧೯೭೮ರ ಕರ್ನಾಟಕ ಕಾರಾಗೃಹಗಳ ಕೈಪಿಡಿಯ ನಿಯಮಗಳ ಉಲ್ಲಂಘಕ್ಕೆ ಕಾರಣರಾಗಿರುವುದರಿಂದ ಅವರುಗಳ ವಿರುದ್ಧ ೧೯೫೭ರ ಕರ್ನಾಟಕ ನಾಗರೀಕ ಸೇವಾ (ಸಿ.ಸಿ. ಮತ್ತು ಎ) ನಿಯಮಾವಳಿಗಳ ನಿಯಮ ೧೧ ಮತ್ತು ೧೩ನೇ ಪ್ರಕಾರ ಜಂಟಿ ಇಲಾಖಾ ವಿಚಾರಣೆ ನಡೆಸಲು ಸರ್ಕಾರದ ಆದೇಶವನ್ನು ಕೋರಿದ್ದಾರೆ.

೧) ಶ್ರೀ. ಕೆ.ಕೆ. ಪಾಟೀಲ್, ಸಹಾಯಕ ಅಧೀಕ್ಷಕ
೨) ಶ್ರೀ. ಬಿ.ಎಸ್.ನಟರಾಜ್, ಜೈಲರ್
೩) ಶ್ರೀ. ರಾಜಾರಾಂ, ವಾರ್ಡರ್
೪) ಶ್ರೀ. ಕೆ. ಜನಾರ್ಧನ, ಹೆಡ್ ವಾರ್ಡರ್
೫) ಶ್ರೀ ಪಿ. ರಮೇಶ, ಹೆಡ್ ವಾರ್ಡರ್
೬) ಶ್ರೀ ಗಣೇಶ ಶೆಟ್ಟಿಗಾರ್, ಹೆಡ್ ವಾರ್ಡರ್
೭) ಶ್ರೀ. ಬಿ.ಗಣೇಶ, ವಾರ್ಡರ್

ಮೇಲೆ ಓದಲಾದ ಕ್ರಮ ಸಂಖ್ಯೆ (೨)ರ ದಿನಾಂಕ ೧೪-೫-೧೯೯೮ರ ಆದೇಶದಲ್ಲಿ ಕಾರಾಗೃಹಗಳ ಮಹಾ ನಿರೀಕ್ಷಕರು ಪ್ರಸ್ತಾಪಿಸಿರುವ ಸಿಬ್ಬಂದಿಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೪-ಎ ನಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ ೨-೧-೯೮ ರಂದು ಮಂಗಳೂರು ಜಿಲ್ಲಾ ಕಾರಾಗೃಹ ದಿಂದ ಬಂದಿಗಳು ಪರಾರಿಯಾಗಲು ಕಾರಣರಾದವರ ವಿರುದ್ಧ ವಿಚಾರಣೆಯನ್ನು ನಡೆಸಲು ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೩)ರ ದಿನಾಂಕ ೨೩-೬-೧೯೯೮ರ ಪತ್ರದಲ್ಲಿ ಸದರಿ ಪ್ರಕರಣದಲ್ಲಿನ ಆರೋಪಿತ ಅಧಿಕಾರಿಗಳು : ನೌಕರರುಗಳ ಮೇಲೆ ತನಿಖೆ ಮಾಡಿಸಲು ಸರ್ಕಾರವು ಇಚ್ಚಿಸಿದಲ್ಲಿ, ಕರ್ನಾಟಕ ಲೋಕಾಯುಕ್ತ ಕಾಯ್ದೆ ಕಲಂ ೭(೨ಎ)ರನ್ವಯ ಯಾವ ಪ್ರಾಧಿಕಾರದ (ಅಂದರೆ ಮಾನ್ಯ ಲೋಕಾಯುಕ್ತರವರ ಅಥವಾ ಮಾನ್ಯ ಉಪ ಲೋಕಾಯುಕ್ತರವರ) ವ್ಯಾಪ್ತಿಯಲ್ಲಿ ತನಿಖೆ ಮಾಡಬೇಕು ಎಂಬುದರ ಬಗ್ಗೆ ನಿರ್ಧಿಷ್ಟ ಮತ್ತು ಸ್ಪಷ್ಟ ಆದೇಶ ಪಡೆದುಕೊಂಡು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೧ರಡಿ ಹೇಳಿರುವ ವಿಧಾನದನ್ವಯ ಇಲಾಖಾ ವಿಚಾರಣೆಯನ್ನು ನಡೆಸಲು ಈ ಸಂಸ್ಥೆಗೆ ವಹಿಸಲು ಇಚ್ಚಿಸಿದಲ್ಲಿ ಆರೋಪಿತ ಅಧಿಕಾರಿಗಳಿಗೆ : ನೌಕರರುಗಳಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಿ, ಅವರಿಂದ ಉತ್ತರ ಪಡೆದು, ತತ್ಸಂಬಂಧದ ದಾಖಲಾತಿಗಳೊಂದಿಗೆ ಯಾವ ಪ್ರಾಧಿಕಾರದ (ಮಾನ್ಯ ಲೋಕಾಯುಕ್ತರವರ ಅಥವಾ ಮಾನ್ಯ ಉಪ ಲೋಕಾಯುಕ್ತರವರ) ವ್ಯಾಪ್ತಿಯಲ್ಲಿ ವಿಚಾರಣೆ ನಡೆಸಬೇಕು ಎನ್ನುವುದರ ಬಗ್ಗೆ ಸ್ಪಷ್ಟ ಮತ್ತು ನಿರ್ದಿಷ್ಟವಾದ ಮಾಹಿತಿಯೊಂದಿಗೆ ಪ್ರಸ್ತಾವನೆಯನ್ನು ಕಳುಹಿಸಿ ಕೊಡುವಂತೆ ಕೋರಿದ್ದಾರೆ.

**ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ದಿನಾಂಕ 13-7-98ರ ಆದೇಶದಲ್ಲಿ ಕರ್ನಾಟಕ ಲೋಕಾಯುಕ್ತರವರು ಅವರ ಪತ್ರ ದಿನಾಂಕ 23-6-98ರ ಪತ್ರದಲ್ಲಿ ತಿಳಿಸಿದ ಸಂದರ್ಭಗಳಿಂದಾಗಿ ದಿನಾಂಕ 14-5-98 ರಂದು ಹೊರಡಿಸಲಾದ ಇಲಾಖಾ ವಿಚಾರಣೆಯ ಆದೇಶ ಸಂಖ್ಯೆ:ಹೆಚ್‌ಡಿ 33 ಪಿಆರ್‌ಈ 98ನ್ನು ತಕ್ಷಣವೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಹಿಂದಕ್ಕೆ ಪಡೆಯಲಾಗಿದೆ.**

**ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ದಿನಾಂಕ 14-12-98ರ ಪತ್ರದಲ್ಲಿ ಕರ್ನಾಟಕ ಲೋಕಾಯುಕ್ತ ಅಧಿನಿಯಮ, 1984ರ ಕಲಂ (7)(2ಎ)ರ ಮೇರೆಗೆ ಕೈದಿಗಳು ಪರಾರಿಯಾಗಲು ಕಾರಣರಾದ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರನ್ನು ಗುರುತಿಸಿ ಕೂಲಂಕುಷವಾಗಿ ತನಿಖೆ ಮಾಡಲು ಉಪ ಲೋಕಾಯುಕ್ತ, ಕರ್ನಾಟಕ ಲೋಕಾಯುಕ್ತರವರ ಕಛೇರಿ, ಬೆಂಗಳೂರು ರವರಿಗೆ ಪ್ರಕರಣವನ್ನು ವಹಿಸಲಾಗಿದೆ. ಹಾಗೂ ಉಪ ಲೋಕಾಯುಕ್ತರವರ ವರದಿಗೆ ಸೂಕ್ತ ಶಿಫಾರಸ್ಸಿನೊಂದಿಗೆ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸಹ ಕೋರಲಾಗಿದೆ.**

ಮೇಲೆ ಓದಲಾದ ಕ್ರಮ ಸಂಖ್ಯೆ (೬)ರ ದಿನಾಂಕ ೨೭-೫-೨೦೦೦ರ ಪತ್ರದಲ್ಲಿ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರು ಮಾನ್ಯ ಉಪ ಲೋಕಾಯುಕ್ತರವರ ಕಾಯಿದೆ ಕಲಂ ೧೨(೩)ರನ್ವಯ ಶಿಫಾರಸ್ಸು ಮಾಡಲಾದ ವರದಿಯನ್ನು ಲಗತ್ತಿಸುತ್ತಾ, ಕರ್ನಾಟಕ ಲೋಕಾಯುಕ್ತ ಕಾಯ್ದೆ ಸೆಕ್ಷನ್ ೧೨(೪)ರನ್ವಯ ಸದರಿ ವರದಿಯ ಮೇರೆಗೆ ಮುಂದಿನ ಸೂಕ್ತ ಕ್ರಮ ತೆಗೆದುಕೊಂಡು, ತೆಗೆದುಕೊಂಡ ಕ್ರಮದ ಬಗ್ಗೆ ೩ ತಿಂಗಳೊಳಗಾಗಿ ವರದಿಯನ್ನು ನೀಡುವಂತೆ ಕೋರಿದ್ದಾರೆ. ಉಪ ಲೋಕಾಯುಕ್ತರವರ ವರದಿಯಲ್ಲಿ ತನಿಖಾ ಕಾಲದಲ್ಲಿ ಸಂಗ್ರಹಿಸಲ್ಪಟ್ಟ ಮಾಹಿತಿ ಹಾಗೂ ದಾಖಲಾತಿಗಳನ್ನು ಪರಿಶೀಲಿಸಿದಾಗ ಆಪಾದಿತ ಸರ್ಕಾರಿ ನೌಕರರ ವಿರುದ್ಧದ ಆರೋಪವು ಮೇಲ್ನೋಟಕ್ಕೆ ಸತ್ಯಾಂಶದಿಂದ ಕೂಡಿದೆ ಎಂದು ಕಂಡು ಬಂದಿರುವುದರಿಂದ ಕರ್ನಾಟಕ ಲೋಕಾಯುಕ್ತ ಅಧಿನಿಯಮ ಕಲಂ ೧೨(೩)ರ ಅಡಿಯಲ್ಲಿ ಆರೋಪಿತ ಸರ್ಕಾರಿ ನೌಕರರ ವಿರುದ್ಧ ಉಗ್ರ ದಂಡನೆ ವಿಧಿಸುವ ವಿಧಿವಿಧಾನದನ್ವಯ ಶಿಸ್ತಿನ ಕ್ರಮ ಜರುಗಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೪-ಎ ಅನ್ವಯ ಈ ಸಂಸ್ಥೆಗೆ ವಹಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೭)ರ ದಿನಾಂಕ ೩೦-೮-೨೦೦೦ರ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೪-ಎ ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ದಿನಾಂಕ ೨-೧-೧೯೯೮ ರಂದು ಮಂಗಳೂರು ಜಿಲ್ಲಾ ಕಾರಾಗೃಹದಿಂದ ಬಂಧಿಗಳು ಪರಾರಿಯಾಗಲು ಕಾರಣರಾದ ಅಧಿಕಾರಿ ಹಾಗೂ ನೌಕರರ ವಿರುದ್ಧ ವಿಚಾರಣೆಯನ್ನು ನಡೆಸಲು ಕರ್ನಾಟಕ ಲೋಕಾಯುಕ್ತ ರವರಿಗೆ ವಹಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೮)ರ ದಿನಾಂಕ ೨೬-೯-೨೦೦೦ರ ಪತ್ರದಲ್ಲಿ ನಿಬಂಧಕರು ಕರ್ನಾಟಕ ಲೋಕಾಯುಕ್ತ ರವರ ಕಛೇರಿ, ಬೆಂಗಳೂರು ರವರು ಕರ್ನಾಟಕ ಲೋಕಾಯುಕ್ತ, ಕಾಯ್ದೆ ಸೆಕ್ಷನ್ ೧೨(೩)ರ ಪ್ರಕಾರ ಪ್ರಕರಣವನ್ನು ಉಪ ಲೋಕಾಯುಕ್ತಕ್ಕೆ ವಹಿಸಬೇಕಾಗಿದ್ದು, ಲೋಕಾಯುಕ್ತಕ್ಕೆ ವಹಿಸಿರುವುದರಿಂದ, ದಿನಾಂಕ ೩೦-೮-೨೦೦೦ರ ಸರ್ಕಾರಿ ಆದೇಶವನ್ನು ಪರಿಷ್ಕರಿಸಿ ಪ್ರಕರಣವನ್ನು ಉಪ ಲೋಕಾಯುಕ್ತಕ್ಕೆ ವಹಿಸುವಂತೆ ಕೋರಿದ್ದಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೯)ರ ದಿನಾಂಕ ೨೪-೧೦-೨೦೦೦ರ ತಿದ್ದುಪಡಿ ಆದೇಶದಲ್ಲಿ ಪ್ರಕರಣವನ್ನು ಲೋಕಾಯುಕ್ತಕ್ಕೆ ವಹಿಸಲಾಗಿದೆ ಎಂಬುದರ ಬದಲಾಗಿ ಕರ್ನಾಟಕ ಉಪ ಲೋಕಾಯುಕ್ತಕ್ಕೆ ವಹಿಸಲಾಗಿದೆ ಎಂದು ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೧೦)ರ ದಿನಾಂಕ ೧-೧೦-೨೦೦೩ರ ಪತ್ರದಲ್ಲಿ ಉಪ ಲೋಕಾಯುಕ್ತ ರವರು ವಿಚಾರಣೆಯನ್ನು ನಡೆಸಿ ದಿನಾಂಕ ೨೯-೧೨-೨೦೦೨ ರಂದು ಸಲ್ಲಿಸಿರುವ ವರದಿಯನ್ನು ಲಗತ್ತಿಸುತ್ತಾ ದಿನಾಂಕ ೨-೧-೯೮ ರಂದು ಮಂಗಳೂರು ಜಿಲ್ಲಾ ಕಾರಾಗೃಹದಿಂದ ಬಂದಿಗಳು ಪರಾರಿಯಾಗಲು ಆಪಾದಿತ ಸರ್ಕಾರಿ ಅಧಿಕಾರಿ : ನೌಕರರುಗಳ ಕರ್ತವ್ಯ ಲೋಪ ಹಾಗೂ ನಿರ್ಲಕ್ಷತನವೇ ಕಾರಣವಾಗಿರುವುದರಿಂದ, ಸದರಿ ನಡತೆಗೆ ಆಪಾದಿತ ಅಧಿಕಾರಿ : ನೌಕರರನ್ನು ಸರ್ಕಾರಿ ಕೆಲಸದಿಂದ ಕಡ್ಡಾಯ ನಿವೃತ್ತಿಗೊಳಿಸಲು ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (೧೧)ರ ದಿನಾಂಕ ೩೦-೧೦-೨೦೦೩ರ ಷೋಕಾಸ್ ನೋಟೀಸ್‌ನಲ್ಲಿ ಆಪಾದಿತ ಸರ್ಕಾರಿ ನೌಕರರ ಪೈಕಿ ಶ್ರೀ.ಕೆ.ಕೆ.ಪಾಟೀಲ್, ಸಹಾಯಕ ಅಧೀಕ್ಷಕ ರವರ ಹೆಸರನ್ನು ಹೊರತುಪಡಿಸಿ ಇನ್ನುಳಿದ ೫ ಜನ ಸಿಬ್ಬಂದಿಗಳಿಗೆ ಮಾನ್ಯ ಲೋಕಾಯುಕ್ತರ ಶಿಫಾರಸ್ಸಿನ ಪತ್ರ ಹಾಗೂ ಮಾನ್ಯ ಉಪ ಲೋಕಾಯುಕ್ತ ರವರ ಜಂಟಿ ಇಲಾಖಾ ವಿಚಾರಣಾ ವರದಿಯ ಪ್ರತಿಯನ್ನು ಲಗತ್ತಿಸಿ, ಸದರಿ ವಿಚಾರಣಾ ವರದಿ ಕುರಿತಂತೆ ಪ್ರತಿವಾದದ ಲಿಖಿತ ಹೇಳಿಕೆಯನ್ನು ನೀಡುವುದಾದಲ್ಲಿ ಸದರಿ ಪತ್ರ ತಲುಪಿದ ೧೫ ದಿನಗಳೊಳಗಾಗಿ ಸಲ್ಲಿಸುವಂತೆ, ಇಲ್ಲವಾದಲ್ಲಿ ನೀವು ಪ್ರತಿವಾದಿಸುವಂತಹ ವಿಷಯಗಳು ಏನೂ ಇಲ್ಲವೆಂದು ಭಾವಿಸಿ, ೧೯೫೭ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ರೀತ್ಯಾ ಮುಂದಿನ ಕ್ರಮ ಜರುಗಿಸಲಾಗುವುದೆಂದು ತಿಳಿಸಲಾಗಿದೆ.

ಸದರಿ ನೋಟೀಸಿಗೆ ಆಪಾದಿತ ಎಲ್ಲಾ ಸರ್ಕಾರಿ ನೌಕರರು ತಮ್ಮ ಪ್ರತಿವಾದದ ಲಿಖಿತ ಹೇಳಿಕೆಗಳನ್ನು ಸಲ್ಲಿಸಿರುತ್ತಾರೆ. ಅದರಲ್ಲಿ ಶ್ರೀ. ಬಿ.ಗಣೇಶ್, ವಾರ್ಡರ್, ಜಿಲ್ಲಾ ಉಪ ಕಾರಾಗೃಹ, ಚಿಕ್ಕಮಗಳೂರು ರವರು ದಿನಾಂಕ ೮-೪-೨೦೦೩ ರಂದು ತಮ್ಮ ಹೇಳಿಕೆಯಲ್ಲಿ ಕಾರಾಗೃಹದಿಂದ ಪರಾರಿಯಾದ ಬಂದಿಗಳಿಗೆ ಆಪಾದಿತ ಸರ್ಕಾರಿ ಅಧಿಕಾರಿಗಳಾದ ನಾವು ಯಾವುದೇ ರೀತಿಯ ಸಹಾಯವನ್ನೂ ಮಾಡಿರುವುದಿಲ್ಲವೆಂದು ಪ್ರಾರಂಭಿಕ ತನಿಖೆ ಮಾಡಿರುವ ಶ್ರೀ ತಾವರ್‌ಖೇಡ್ ರವರು ತಿಳಿಸಿದ್ದರೂ ಮಾನ್ಯ ಲೋಕಾಯುಕ್ತರು ನಮ್ಮ ಅಹವಾಲುಗಳನ್ನು ಸಮಂಜಸವಾಗಿ ಪರಿಗಣಿಸದೇ ಏಕ ಪಕ್ಷೀಯವಾಗಿ ನಮ್ಮನ್ನು ಬಲಿಪಶುವನ್ನಾಗಿ ಮಾಡಿ, ಕೇವಲ ಕರ್ತವ್ಯ ನಿರ್ಲಕ್ಷತೆಯ ನೆಪದಲ್ಲಿ ನನ್ನನ್ನು ಸೇವೆಯಿಂದ ನಿವೃತ್ತಿಗೊಳಿಸುವ ಅಹಿತಕರವಾದ ತೀರ್ಮಾನವನ್ನು ನೀಡಿರುವುದು ಸೋಜಿಗದ ಸಂಗತಿಯೆಂದು ತಿಳಿಸುತ್ತಾ, ಕರ್ತವ್ಯ ನಿರ್ಲಕ್ಷತನದ ಆರೋಪವನ್ನು ವಜಾಗೊಳಿಸಿ ಆರೋಪ ಮುಕ್ತರನ್ನಾಗಿ ಮಾಡಿ ನಮ್ಮ ಜೀವನಾಧಾರ ಉಳಿಸಿಕೊಡಬೇಕೆಂದು ವಿನಂತಿಸಿರುತ್ತಾರೆ.

ಶ್ರೀ. ರಾಜಾರಾಂ, ವಾರ್ಡರ್, ಜಿಲ್ಲಾ ಕಾರಾಗೃಹ, ಮಡಿಕೇರಿ ರವರು ದಿನಾಂಕ ೭-೪-೨೦೦೩ ರಂದು ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸುತ್ತಾ, ನನ್ನ ಮೇಲಿನ ಆರೋಪಗಳ ಕುರಿತಂತೆ ಈಗಾಗಲೇ ನಡೆಸಲಾದ ವಿಚಾರಣಾ ಆಧಾರದ ಮೇಲೆಯೇ ಮಾನ್ಯ ಲೋಕಾಯುಕ್ತರು ತೀರ್ಮಾನ ತೆಗೆದುಕೊಂಡು ಅಂದರೆ ಸಾಕ್ಷ್ಯಾಧಾರಗಳಿಲ್ಲದೇ ವಿಚಾರಣೆಯನ್ನು ನಡೆಸಿ ನಮ್ಮನ್ನು ತಪ್ಪಿತಸ್ಥರನ್ನಾಗಿ ಮಾಡಿ ನೀಡಬಾರದಂತಹ ಶಿಕ್ಷೆಯಾದ ಸೇವೆಯಿಂದ ನಿವೃತ್ತಿಗೊಳಿಸುವ ಶಿಕ್ಷೆಯನ್ನು ವಿಧಿಸಿರುವುದು ತುಂಬಾ ದುರದೃಷ್ಟಕರವಾಗಿದೆ.

ಇದರಿಂದ ನನಗೂ ಹಾಗೂ ನನ್ನ ಕುಟುಂಬವು ಹೊಟ್ಟೆಗಿಲ್ಲದೆ ಜೀವನ ಸಾಗಿಸುವಂತಹ ಪರಿಸ್ಥಿತಿ ಉಂಟಾಗುವುದರಿಂದ, ಮಾನ್ಯ ಲೋಕಾಯುಕ್ತದ ಶಿಫಾರಸ್ಸನ್ನು ಅನುಷ್ಠಾನಗೊಳಿಸದೆ ನ್ಯಾಯ ಒದಗಿಸುವಂತೆ ಕೋರಿದ್ದಾರೆ.

ಶ್ರೀ. ಕೆ. ಜನಾರ್ಧನ್, ಹೆಡ್ ವಾರ್ಡರ್, ಜಿಲ್ಲಾ ಕಾರಾಗೃಹ, ಮಂಗಳೂರು ರವರು ದಿನಾಂಕ ೮-೪-೨೦೦೩ ರಂದು ತಮ್ಮ ಹೇಳಿಕೆಯನ್ನು ನೀಡುತ್ತಾ, ವಿಚಾರಣಾ ವರದಿಯು ಕಾನೂನು ಬದ್ಧವಾಗಿರುವುದಿಲ್ಲ. ದಾಖಲೆಗಳನ್ನು ಪರಿಶೀಲಿಸಿರುವುದಿಲ್ಲ. ಆದ್ದರಿಂದ ಇದು ಏಕಮುಖ ಅಭಿಪ್ರಾಯವಾಗಿದೆ. ಆದ್ದರಿಂದ ಸದರಿ ವಿಚಾರಣಾ ವರದಿಯನ್ನು ತಿರಸ್ಕರಿಸಿ ಆರೋಪ ಸಾಬೀತಾಗಿಲ್ಲವೆಂದು ತೀರ್ಮಾನಿಸಿ ಆರೋಪದಿಂದ ಮುಕ್ತ ಮಾಡ ಬೇಕೆಂದು ಕೋರಿದ್ದಾರೆ.

ಶ್ರೀ. ಪಿ.ರಮೇಶ್, ಹೆಡ್ ವಾರ್ಡರ್, ಜಿಲ್ಲಾ ಕಾರಾಗೃಹ, ಮಂಗಳೂರು ರವರು ದಿನಾಂಕ ೭-೪-೨೦೦೩ರಂದು ತಮ್ಮ ಹೇಳಿಕೆಯನ್ನು ಸಲ್ಲಿಸುತ್ತಾ, ನಾನು ರಾತ್ರಿಯ ಕರ್ತವ್ಯವೆಂದು ಹೇಳಿರುವ ಆರೋಪವು ಸರಿಯಲ್ಲ. ನಾನು ಹಗಲು ಕರ್ತವ್ಯದಲ್ಲಿದ್ದೆನು. ಇದನ್ನು ವಿಚಾರಣಾಧಿಕಾರಿಗಳು ಪರಿಗಣಿಸಿರುವುದಿಲ್ಲ. ಇದರಿಂದ ನನ್ನ ಮೇಲಿನ ಆರೋಪ ಸರಿಯಿಲ್ಲ. ಹೀಗಿದ್ದರೂ ಮಾನ್ಯ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವ ದಂಡನೆಯು ಹೆಚ್ಚಾಗಿದೆಯೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ ೧೮ ಸೇಇವಿ ೨೦೦೧, ದಿನಾಂಕ ೧೪-೯-೨೦೦೧ರ ಪ್ರಕಾರ ಕರ್ತವ್ಯ ನಿರ್ಲಕ್ಷತೆಗೆ ವಾಗ್ದಂಡನೆಯನ್ನು ವಿಧಿಸಲು ಸೂಚಿಸಿರುತ್ತಾರೆ. ಆದ್ದರಿಂದ ನನಗೆ ವಿಧಿಸಬೇಕಾದ ದಂಡನೆಯನ್ನು ಅಂದರೆ ಸೇವೆಯಿಂದ ನಿವೃತ್ತಿಗೊಳಿಸುವ ದಂಡನೆಯನ್ನು ಕಡಿಮೆ ಮಾಡುವಂತೆ ವಿನಂತಿಸಿರುತ್ತಾರೆ.

ಶ್ರೀ. ಗಣೇಶ್ ಶೆಟ್ಟಿಗಾರ್, ವಾರ್ಡರ್, ಜಿಲ್ಲಾ ಕಾರಾಗೃಹ, ಮಂಗಳೂರು ರವರು ದಿನಾಂಕ ೭-೪-೨೦೦೩ ರಂದು ತಮ್ಮ ಹೇಳಿಕೆಯನ್ನು ನೀಡುತ್ತಾ, ನಾನು ರಾತ್ರಿ ಕರ್ತವ್ಯದಲ್ಲಿದ್ದೆನು ಎಂದು ಆರೋಪಿಸಿರುವುದು ಸರಿಯಲ್ಲ. ಕಾರಣ ನಾನು ಹಗಲು ಕರ್ತವ್ಯದಲ್ಲಿದ್ದು, ಬಂದಿಗಳ ಉಸ್ತುವಾರಿಯನ್ನು ಹೊಂದಿರುವುದಿಲ್ಲ. ಸದರಿ ಸಮಯದಲ್ಲಿ ನಾನು ನನ್ನ ಕರ್ತವ್ಯವನ್ನು ಚಾಚೂ ತಪ್ಪದೇ ಪಾಲಿಸಿರುತ್ತೇನೆ. ಇದನ್ನು ವಿಚಾರಣಾಧಿಕಾರಿಗಳು ಪರಿಶೀಲಿಸಿರುವುದಿಲ್ಲ. ಆದರೂ ನನ್ನ ಮೇಲಿನ ಆರೋಪ ಸಾಬಿತಾಗಿದೆ ಎಂದು ನಿರ್ಧರಿಸಿರುವುದು ಸರಿಯಾದ ಕ್ರಮವಲ್ಲ. ಇದಕ್ಕೆ ಮಾನ್ಯ ಲೋಕಾಯುಕ್ತರವರು ಶಿಫಾರಸ್ಸು ಮಾಡಿರುವ ದಂಡನೆಯು ಹೆಚ್ಚಾಗಿ ದೆಯೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಇದು ನನ್ನ ಮೇಲಿನ ಆರೋಪಕ್ಕೆ ವಿರುದ್ಧವಾಗಿದೆ. ಒಂದು ಪಕ್ಷ ಶಿಸ್ತು ಪ್ರಾಧಿಕಾರವು ನನ್ನ ಆರೋಪವನ್ನು ಸಾಬೀತುಪಡಿಸಿದಲ್ಲಿ ಈಗ ಶಿಫಾರಸ್ಸು ಮಾಡಿರುವ ದಂಡನೆಯನ್ನು ಕಡಿಮೆಗೊಳಿಸಿ ವಾಗ್ಧಂಡನೆಯನ್ನು ವಿಧಿಸಬೇಕೆಂದು ಕೋರಿರುತ್ತಾರೆ.

ಆರೋಪಿತ ಅಧಿಕಾರಿ : ಸಿಬ್ಬಂದಿಗಳ ಪ್ರತಿ ರಕ್ಷಣಾ ಹೇಳಿಕೆಗಳನ್ನು ಇಲಾಖಾ ವಿಚಾರಣೆಯ ಕಡತಗಳನ್ನು ಹಾಗೂ ಮಾನ್ಯ ಲೋಕಾಯುಕ್ತರು ಮಾಡಿರುವ ಶಿಫಾರಸ್ಸುಗಳನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಮಂಗಳೂರು ಜಿಲ್ಲಾ ಕಾರಾಗೃಹದಿಂದ ದಿನಾಂಕ ೨-೧-೧೯೯೮ರಂದು ೫ ಜನ ಬಂದಿಗಳು ಜೈಲಿನ ಸೆಲ್‌ನ ಗೋಡೆಯ ಇಟ್ಟಿಗೆಯನ್ನು ಕೊರೆದು ಕಿಂಡಿ ಮಾಡಿ ಪರಾರಿಯಾಗಿ ರುವುದಕ್ಕೆ ಕಾರಾಗೃಹಗಳ ಇಲಾಖೆಯ ಈ ಕೆಳಕಂಡ ಸಿಬ್ಬಂದಿಗಳು ಕಾರಣರಾಗಿರುತ್ತಾರೆ.

೧) ಶ್ರೀ. ಕೆ. ಜನಾರ್ಧನ, ಹೆಡ್ ವಾರ್ಡರ್
೨) ಶ್ರೀ ಪಿ. ರಮೇಶ, ಹೆಡ್ ವಾರ್ಡರ್
೩) ಶ್ರೀ. ರಾಜಾರಾಂ, ವಾರ್ಡರ್
೪) ಶ್ರೀ. ಬಿ.ಗಣೇಶ, ವಾರ್ಡರ್
೫) ಶ್ರೀ ಗಣೇಶ ಶೆಟ್ಟಿಗಾರ್, ಹೆಡ್ ವಾರ್ಡರ್

ಮೇಲೆ ಸೂಚಿಸಿರುವ ಆರೋಪಿತರ ವಿರುದ್ಧದ ಆರೋಪಗಳು ಸಾಬೀತಾಗಿರುವುದನ್ನು ಪರಿಗಣಿಸಿ ಸರ್ಕಾರ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ ೩೩ ಪಿಆರ್‌ಇ ೯೮, ಬೆಂಗಳೂರು, ದಿನಾಂಕ:೧೨ನೇ ಫೆಬ್ರವರಿ ೨೦೦೪**

ಮೇಲೆ ವಿವರಿಸಿರುವ ವಾಸ್ತವಾಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು ೧೯೫೭ರ ನಿಯಮ ೧೪-ಎ ಅನ್ವಯ ಮಾನ್ಯ ಲೋಕಾಯುಕ್ತರವರು ಮಾಡಿರುವ ಶಿಫಾರಸ್ಸನ್ನು ಸರ್ಕಾರ ಒಪ್ಪಿ, ಸದರಿ ನಿಯಮಗಳ ನಿಯಮ ೮(vi) ರನ್ವಯ ಕಾರಾಗೃಹಗಳ ಇಲಾಖೆಯ ಈ ಕೆಳಕಂಡ ಸಿಬ್ಬಂದಿಯನ್ನು ಈ ಕೂಡಲೇ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ದಂಡನೆಯನ್ನು ವಿಧಿಸಲು ಆದೇಶಿಸಲಾಗಿದೆ:-

೧) ಶ್ರೀ. ಕೆ. ಜನಾರ್ಧನ, ಹೆಡ್ ವಾರ್ಡರ್, ಜಿಲ್ಲಾ ಕಾರಾಗೃಹ, ಮಂಗಳೂರು.
೨) ಶ್ರೀ ಪಿ. ರಮೇಶ್, ಹೆಡ್ ವಾರ್ಡರ್, ಜಿಲ್ಲಾ ಕಾರಾಗೃಹ, ಮಂಗಳೂರು.
೩) ಶ್ರೀ. ರಾಜಾರಾಂ, ವಾರ್ಡರ್, ಜಿಲ್ಲಾ ಕಾರಾಗೃಹ, ಮಡಿಕೇರಿ.
೪) ಶ್ರೀ. ಬಿ.ಗಣೇಶ, ವಾರ್ಡರ್, ಜಿಲ್ಲಾ ಕಾರಾಗೃಹ, ಚಿಕ್ಕಮಗಳೂರು.
೫) ಶ್ರೀ ಗಣೇಶ ಶೆಟ್ಟಿಗಾರ್, ಹೆಡ್ ವಾರ್ಡರ್, ಜಿಲ್ಲಾ ಕಾರಾಗೃಹ, ಮಂಗಳೂರು.

ಅಂತೆಯೇ ಮೇಲೆ ಸೂಚಿಸಿರುವ ಕಾರಾಗೃಹಗಳ ಇಲಾಖೆಯ ಸಿಬ್ಬಂದಿಗಳನ್ನು ಅವರುಗಳು ಹೊಂದಿರುವ ಹುದ್ದೆಗಳಿಂದ ಕೂಡಲೇ ಬಿಡುಗಡೆ ಮಾಡಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 374

**ಜಿ.ಕೆ. ಗುರಾಣಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಒಳಾಡಳಿತ ಮತ್ತು ಸಾರಿಗೆ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

## ಕಾನೂನು ಸಚಿವಾಲಯ

**ವಿಷಯ:** 2003-04ನೇ ಸಾಲಿಗೆ ಮಂಡ್ಯ ಜಿಲ್ಲೆಯ ವಿವಿಧ ವಕೀಲರುಗಳ ಸಂಘಗಳಿಗೆ ಸಹಯಾನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಅಧಿಸೂಚನೆ ಸಂಖ್ಯೆ: ಲಾ 82 ಎಲ್‌ಸಿಎಲ್ 83, ದಿನಾಂಕ:17:18-3-83.
2. ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಸಿಎಲ್ 96, ದಿನಾಂಕ: 30-10-96.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರ ಪತ್ರ ದಿನಾಂಕ:17-10-2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ:17:18-3-83ರ ಅಧಿಸೂಚನೆಯನ್ವಯ ರಾಜ್ಯದಲ್ಲಿನ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಕೊಳ್ಳಲು ಕರ್ನಾಟಕ ಗ್ರಾಂಟ್-ಇನ್-ಎಡ್-ಟು-ಬಾರ್ ಅಸೋಸಿಯೇಷನ್ಸ್ ರೂಲ್ಸ್ 1983ನ್ನು ರಚಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ:30-10-96ರ ಅಧಿಸೂಚನೆಯನ್ವಯ ಕರ್ನಾಟಕ ಗ್ರಾಂಟ್-ಇನ್-ಏಡ್-ಟು-ಬಾರ್ ಅಸೋಸಿಯೇಷನ್ (ತಿದ್ದುಪಡಿ) ನಿಯಮಗಳು 1996ನ್ನು ಹೊರಡಿಸಿ ಜಿಲ್ಲಾ ಮಟ್ಟದ ವಕೀಲರುಗಳ ಸಂಘಗಳಿಗೆ ರೂ.25,000.00 ಹಾಗೂ ತಾಲ್ಲೂಕು ಮಟ್ಟದ ವಕೀಲರ ಸಂಘಗಳಿಗೆ ರೂ.10,000 ದಂತೆ ಸಹಾಯಾನುದಾನ ಬಿಡುಗಡೆ ಮಾಡಲು ಅವಕಾಶ ಕಲ್ಪಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ:17-10-03ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮಂಡ್ಯ ಇವರು ತಮ್ಮ ಅಧೀನದಲ್ಲಿ ಬರುವ ಈ ಕೆಳಕಂಡ ವಕೀಲರುಗಳ ಸಂಘಗಳಿಗೆ 2003-04ನೇ ಸಾಲಿಗೆ ಸಹಾಯಾನುದಾನ ಮಂಜೂರು ಮಾಡುವಂತೆ ಕೋರಿರುತ್ತಾರೆ.

1) ಮಂಡ್ಯ ಜಿಲ್ಲಾ ಮಟ್ಟದ ವಕೀಲರ ಸಂಘ
2) ಶ್ರೀರಂಗಪಟ್ಟಣ ವಕೀಲರ ಸಂಘ
3) ನಾಗಮಂಗಲ
4) ಮಳವಳ್ಳಿ
5) ಪಾಂಡವಪುರ
6) ಕೆ.ಆರ್. ಪೇಟೆ
7) ಮದ್ದೂರು

ಅದರನ್ವಯ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಮಂಡ್ಯ ಜಿಲ್ಲೆಯ ಮೇಲಿನ ಸಂಘಗಳಿಗೆ ಅನುಬಂಧದಲ್ಲಿ ಸೂಚಿಸಿರುವಂತೆ ಒಟ್ಟು ರೂ.85,000 ಅನುದಾನ ವಿತರಿಸಲು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 127 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 16ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆಯ ವಿವಿಧ ವಕೀಲರುಗಳ ಸಂಘಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವಂತೆ ಅನುದಾನ ಮಂಜೂರು ಮಾಡಲು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಮಂಡ್ಯ ಇವರಿಗೆ ಒಟ್ಟು ರೂ.85,000 (ರೂ. ಎಂಭತ್ತೈದು ಸಾವಿರಗಳು ಮಾತ್ರ) ಸಹಾಯಾನುದಾನ ಬಿಡುಗಡೆ ಮಾಡಿದೆ.

ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ನ್ಯಾಯವಾದಿಗಳ ಸಂಘಗಳಿಗೆ ತ್ವರಿತವಾಗಿ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನವೇ ಮೊತ್ತವನ್ನು ಮಂಜೂರು ಮಾಡತಕ್ಕದ್ದು.

ಈ ಸಹಾಯಾನುದಾನವನ್ನು 2003-04ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2014-00-105-0-08-059 ಸಹಾಯಾನುದಾನ (ಯೋಜನೇತರ) ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10-7-96 ರನ್ವಯ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಹೆಚ್. ನಾಗೇಂದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

## ಅನುಬಂಧ

**ಸರ್ಕಾರಿ ಆದೇಶ ಸಂಖ್ಯೆ: ಲಾ 127 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ:16-03-2004**

ಮಂಡ್ಯ ಜಿಲ್ಲೆಯ ವಿವಿಧ ಕಂದಾಯ ತಾಲ್ಲೂಕು ಮಟ್ಟದ ವಕೀಲರುಗಳ ಸಂಘಗಳಿಗೆ ಬಿಡುಗಡೆ ಮಾಡಿದ ಅನುದಾನದ ವಿವರ

| ಕ್ರ. ಸಂ. | ಜಿಲ್ಲೆಯ ಹೆಸರು | ವಕೀಲರುಗಳ ಸಂಘ | | ಬಿಡುಗಡೆಗೊಳಿಸಲಾದ ಅನುದಾನದ ಮೊತ್ತ |
|---|---|---|---|---|
| | | ಜಿಲ್ಲಾ ಮಟ್ಟ | ತಾಲ್ಲೂಕು ಮಟ್ಟ | ರೂ.ಗಳಲ್ಲಿ |
| 1. | ಮಂಡ್ಯ ಜಿಲ್ಲೆ | ಮಂಡ್ಯ-ಜಿಲ್ಲಾಮಟ್ಟ | | 25,000.00 |
| | | | 1) ಶ್ರೀರಂಗಪಟ್ಟಣ | 10,000.00 |
| | | | 2) ನಾಗಮಂಗಲ | 10,000.00 |
| | | | 3) ಮಳವಳ್ಳಿ | 10,000.00 |
| | | | 4) ಪಾಂಡವಪುರ | 10,000.00 |
| | | | 5) ಕೆ.ಆರ್. ಪೇಟೆ | 10,000.00 |
| | | | 6) ಮದ್ದೂರು | 10,000.00 |
| | **ಒಟ್ಟು 7 ಸಂಘಗಳು** | | | **85,000.00** |

**ಜಿ.ಹೆಚ್. ನಾಗೇಂದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2).

ಪಿ.ಆರ್. 350

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಶ್ರೀ ಮಹಮದ್ ಸರ್ವರ್, ಶಿಶು ಅಭಿವೃದ್ಧಿ ಯೋಜನಾಧಿಕಾರಿ, ಅಂಕೋಲ ತಾಲ್ಲೂಕು, ಇವರ ವಿರುದ್ಧ ಮರು ಇಲಾಖಾ ವಿಚಾರಣೆ ನಡೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ. ಮಮಇ 37 ಎಸ್‌ಜೆಡಿ 98 ದಿನಾಂಕ:27-6-2001.
2. ಶ್ರೀ ಮಹಮದ್ ಸರ್ವರ್, ಇವರ ಪುನರ್ ಪರಿಶೀಲನಾ ಅರ್ಜಿ ದಿನಾಂಕ:25-7-2001.
3. ಸರ್ಕಾರಿ ಆದೇಶ ಸಂ. ಮಮಇ 37 ಎಸ್‌ಜೆಡಿ 98 ದಿನಾಂಕ:23-9-2002.
4. ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ನಂ.14156/02 ದಿನಾಂಕ:1-4-2003.
5. ಸರ್ಕಾರಿ ಆದೇಶ ಸಂ. ಮಮಇ 97 ಎಸ್‌ಜೆಡಿ 2003 ದಿನಾಂಕ:24-9-2003.
6. ಸರ್ಕಾರಿ ಆದೇಶ ಸಂ. ಮಮಇ 97 ಎಸ್‌ಜೆಡಿ 2003 ದಿನಾಂಕ:22-10-2003.
7. ಶ್ರೀಮತಿ ಎಸ್.ಟಿ. ಭಾನು ಜಂಟಿ ನಿರ್ದೇಶಕರು (ಐಸಿಡಿಎಸ್), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರ ಪತ್ರ ದಿನಾಂಕ:24-2-2004.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ. (6)ರಲ್ಲಿ ಶ್ರೀ ಮಹಮದ್ ಸರ್ವರ್, ಬಾಲವಿಕಾಸ ಯೋಜನಾಧಿಕಾರಿ, ಅಂಕೋಲಾ ತಾಲ್ಲೂಕ್, ಇವರ ವಿರುದ್ಧ ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ. 14156/2003 ದಿನಾಂಕ:1-4-2003ರಲ್ಲಿ ನೀಡಿರುವ ತೀರ್ಪಿನ ಅನ್ವಯ ಇವರ ವಿರುದ್ಧ ಹೂಡಲಾಗಿರುವ ಆರೋಪಗಳ ಮೇಲೆ, ಕರ್ನಾಟಕ ನಾಗರೀಕ ಸೇವಾ (ನಡತೆ, ವರ್ಗೀಕರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 1 ರಡಿಯಲ್ಲಿ ಹೊಸದಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಆದೇಶಿಸಿದೆ. ಇದಕ್ಕಾಗಿ ಶ್ರೀ ಟಿ.ಜೆ. ಮರಿಯಪ್ಪ ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಗಳನ್ನಾಗಿಯೂ ಮತ್ತು ಶ್ರೀಮತಿ ಎಸ್.ಟಿ.ಭಾನು, ಜಂಟಿ ನಿರ್ದೇಶಕರು (ಆಡಳಿತ) ಪ್ರಧಾನ ಕಛೇರಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇವರನ್ನು ಮಂಡನಾಧಿಕಾರಿಗಳನ್ನಾಗಿಯೂ ನೇಮಿಸಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ.(7)ರ ದಿನಾಂಕ 24-2-2004ರ ಪತ್ರದಲ್ಲಿ ಶ್ರೀಮತಿ ಎಸ್.ಟಿ. ಭಾನು ಜಂಟಿ ನಿರ್ದೇಶಕರು, (ಐಸಿಡಿಎಸ್) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಧಾನ ಕಚೇರಿ, ಬೆಂಗಳೂರು, ಇವರು ವರ್ಗಾವಣೆಗೊಂಡಿದ್ದು, ಪ್ರಸ್ತುತ ಜಂಟಿನಿರ್ದೇಶಕರು (ಆಡಳಿತ) ಆಗಿ ಕಾರ್ಯ ನಿರ್ವಹಿಸುತ್ತಿರುವ ಶ್ರೀ ಕೆ.ಸಿ. ಶಿವಶಂಕರ್, ಹಿರಿಯ ಕೆ.ಎ.ಎಸ್. ಅಧಿಕಾರಿ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಬೇಕೆಂದು ಕೋರಿರುತ್ತಾರೆ. ಸದರಿ ಇಲಾಖಾ ವಿಚಾರಣೆಯು ಇನ್ನೂ ಪ್ರಾರಂಭಿಕ ಹಂತದಲ್ಲಿರುವುದರಿಂದ ಶ್ರೀ ಮಹಮದ್ ಸರ್ವರ್, ಬಾಲ ವಿಕಾಸ ಯೋಜನಾಧಿಕಾರಿಗಳು, ಅಂಕೋಲ ತಾಲ್ಲೂಕು. ಇವರ ವಿರುದ್ಧ ಹೊಸದಾಗಿ ಇಲಾಖಾ ವಿಚಾರಣೆ ನಡೆಸುವ ಬಗ್ಗೆ ಶ್ರೀಮತಿ ಎಸ್.ಟಿ. ಭಾನುರವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿರುವುದನ್ನು ಬದಲಾಯಿಸಿ, ಶ್ರೀ ಕೆ.ಸಿ. ಶಿವಶಂಕರ್, ಜಂಟಿ ನಿರ್ದೇಶಕರು (ಆಡಳಿತ), ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು. ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಲು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 438 ಎಸ್‌ಜೆಡಿ 2003, ಬೆಂಗಳೂರು, ದಿನಾಂಕ: 15ನೇ ಮಾರ್ಚ್ 2004**

ಶ್ರೀ ಮಹಮದ್ ಸರ್ವರ್, ಬಾಲ ವಿಕಾಸ ಯೋಜನಾಧಿಕಾರಿ, ಅಂಕೋಲ ತಾಲ್ಲೂಕು, ಇವರ ವಿರುದ್ಧ ಹೊಸದಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ಶ್ರೀಮತಿ ಎಸ್.ಟಿ.ಭಾನು ಜಂಟಿ ನಿರ್ದೇಶಕರು, ಪ್ರಧಾನ ಕಛೇರಿ, ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಿಸಿರುವುದನ್ನು ಬದಲಾಯಿಸಿ, ಶ್ರೀ ಕೆ.ಸಿ. ಶಿವಶಂಕರ್, ಜಂಟಿ ನಿರ್ದೇಶಕರು (ಆಡಳಿತ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಪ್ರಧಾನ ಕಛೇರಿ, ಬೆಂಗಳೂರು ಇವರನ್ನು ನೇಮಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 368

**ಪ್ರ.ದ. ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ದಾವಣಗೆರೆ ನಗರ ಕುಟುಂಬ ಕಲ್ಯಾಣ ಕೇಂದ್ರದಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಹಣ ದುರುಪಯೋಗಪಡಿಸಿ ಕೊಂಡಿರುವ ಆರೋಪದಿಂದ ಆದೇಶ ಹೊರಡಿಸಲಾದ ಅಧಿಕಾರಿ/ನೌಕರರುಗಳ ಅಮಾನತ್ತಿನ ಅವಧಿ ಸಕ್ರಮಗೊಳಿಸಲು ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಆಕುಕ 147 ಎಂಎಸ್ಎ 98 ದಿನಾಂಕ: 6/10/1999.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 147 ಎಂಎಸ್ಎ 98 ದಿನಾಂಕ: 31/12/1999.
3. ಸರ್ಕಾರದ ಆದೇಶ ಸಂಖ್ಯೆ: ಆಕುಕ 147 ಎಂಎಸ್ಎ 98 ದಿನಾಂಕ: 7/3/2003.

**ಪ್ರಸ್ತಾವನೆ:**

ದಾವಣಗೆರೆ ನಗರ ಕುಟುಂಬ ಕಲ್ಯಾಣ ಕೇಂದ್ರದಲ್ಲಿ ಸುಳ್ಳು ದಾಖಲೆಗಳನ್ನು ಸೃಷ್ಟಿಸಿ ಸರ್ಕಾರದ ಹಣ ದುರುಪಯೋಗಪಡಿಸಿ ಕೊಂಡಿರುವ ಆರೋಪಕ್ಕೆ ಸದರಿ ಪ್ರಕರಣದಲ್ಲಿ ಶಾಮೀಲಾದವರೆನ್ನಲಾದ ಆಪಾದಿತರುಗಳನ್ನು ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅವರುಗಳ ವಿರುದ್ಧದ ಶಿಸ್ತುಕ್ರಮ ಬಾಕಿ ಇರಿಸಿ ಸೇವೆಯಿಂದ ಅಮಾನತ್ತುಗೊಳಿಸಲಾಯಿತು. ನಂತರ ಮೇಲೆ (2)ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಇವರುಗಳ ವಿರುದ್ಧದ ಶಿಸ್ತುಕ್ರಮ ಬಾಕಿ ಇರಿಸಿ ಅಮಾನತ್ತು ವಿಖಂಡನೆಗೊಳಿಸಿ ಸೇವೆಗೆ ಮರು ನೇಮಕಾತಿ ಮಾಡಲಾಯಿತು.

ಪ್ರಕರಣದ ಇಲಾಖಾ ವಿಚಾರಣೆಯ ನಂತರ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಂಬಂಧಿಸಿದ ಆಪಾದಿತರುಗಳಿಗೆ ಸಂಬಂಧಿಸಿದ ಆಪಾದನೆಯ ಬಗ್ಗೆ ನಿಯಮಾನುಸಾರ ಪರಿಶೀಲಿಸಿದ ನಂತರ ಪ್ರಕರಣದ ಅಂತಿಮ ತೀರ್ಮಾನ ತೆಗೆದುಕೊಂಡು ಸರ್ಕಾರದ ಆದೇಶ ಹೊರಡಿಸಲಾಯಿತು.

ಸದರಿ ಪ್ರಕರಣದಲ್ಲಿ ಅಮಾನತ್ತುಗೊಳಿಸಲಾದ ಅವಧಿಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಕರಣದಲ್ಲಿಯ ದಂಡನೆಗೊಳಗಾದ ಆಪಾದಿತರುಗಳನ್ನು ಅಮಾನತ್ತಿನಲ್ಲಿರಿಸಿದ ಅವಧಿಯನ್ನು ಅಮಾನತ್ತಿನ ಅವಧಿಯನ್ನಾಗಿಯೂ, ಮತ್ತು ದೋಷಮುಕ್ತರನ್ನಾಗಿಸಿದ ಆಪಾದಿತರುಗಳನ್ನು ಮತ್ತು ಪ್ರಕರಣದ ಅಂತಿಮ ಆದೇಶ ಹೊರಡಿಸುವುದಕ್ಕಿಂತ ಮೊದಲು ಮರಣ ಹೊಂದಿದ ಶ್ರೀಮತಿ ಜಿ.ಪಿ. ಶಾರದಮ್ಮ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಮತ್ತು ಶ್ರೀ ಎ.ಎಂ. ಶರಣಯ್ಯ, ಪ್ರಥಮ ದರ್ಜೆ ಸಹಾಯಕ ಇವರುಗಳ ಅಮಾನತ್ತಿನಲ್ಲಿರಿಸಿದ ಅವಧಿಯನ್ನು ಕರ್ತವ್ಯದ ಅವಧಿಯನ್ನಾಗಿ ಪರಿಗಣಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಆದೇಶ ಸಂಖ್ಯೆ:ಆಕುಕ 96 ಎಂಎಸ್ಎ 2003, ಬೆಂಗಳೂರು, ದಿನಾಂಕ: 9ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು, ಈ ಕೆಳಕಂಡ ಅಧಿಕಾರಿ / ನೌಕರರುಗಳನ್ನು ಅಮಾನತ್ತಿನಲ್ಲಿರಿಸಿದ ಅವಧಿಯನ್ನು ಈ ಕೆಳಕಂಡಂತೆ ಪರಿಗಣಿಸಿ ಆದೇಶಿಸಿದೆ.

| | | |
|---|---|---|
| 1) | ಡಾ: ಟಿ.ಹೆಚ್. ಈಶ್ವರಪ್ಪ, ಜಿಲ್ಲಾ ಕುಷ್ಠರೋಗ ನಿವಾರಣಾಧಿಕಾರಿ. | ಕರ್ತವ್ಯದ ಅವಧಿ ಎಂದು ಪರಿಗಣಿಸಿದೆ. |
| 2) | ಶ್ರೀಮತಿ ಜಿ.ಜೆ. ಪತ್ತಾರ್, ಶುಶ್ರೂಷಕಿ. | |
| 3) | ಶ್ರೀಮತಿ ಜಿ.ಪಿ. ಶಾರದಮ್ಮ | |
| 4) | ಶ್ರೀ ಎ.ಎಂ. ಶರಣಯ್ಯ, ಪ್ರ.ದ.ಸಹಾಯಕ. | |
| 5) | ಶ್ರೀಮತಿ ಎಸ್.ಹೆಚ್. ಅಕ್ಕಮಹಾದೇವಿ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ. | |
| 6) | ಶ್ರೀ ಪಿ.ಎಂ. ಶಿರೂರ, ಕಛೇರಿ ಅಧೀಕ್ಷಕರು. | ಅಮಾನತ್ತಿನ ಅವಧಿಯನ್ನು ಅಮಾನತ್ತೇ ಎಂದು ಪರಿಗಣಿಸಿದೆ. |
| 7) | ಶ್ರೀಮತಿ ಕಣುಮಕ್ಕ, ಹಿ.ಮ.ಆ. ಸಹಾಯಕಿ | |
| 8) | ಶ್ರೀಮತಿ ಪ್ರಭಾವತಮ್ಮ, ಕಿ.ಮ.ಆ.ಸಹಾಯಕಿ. | |
| 9) | ಶ್ರೀಮತಿ ನಾಗರತ್ನಮ್ಮ, ಕಿ.ಮ.ಆ.ಸಹಾಯಕಿ. | |
| 10) | ಶ್ರೀಮತಿ ಎಸ್. ಜಯಶೀಲ, ಕಿ.ಮ.ಆ.ಸಹಾಯಕಿ. | |
| 11) | ಶ್ರೀಮತಿ ಆರ್.ಎಂ. ನಾರಾಯಣಮ್ಮ, ಕಿ.ಮ.ಆ.ಸಹಾಯಕಿ. | |
| 12) | ಶ್ರೀಮತಿ ಆಂಜನಮ್ಮ, ಕಿ.ಮ.ಆ.ಸಹಾಯಕಿ. | |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 375

**ಎಸ್.ಕೆ. ತೆಗ್ಗಿನಮನಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ:** ಮೈಸೂರು ವೈದ್ಯಕೀಯ ಕಾಲೇಜಿನ ನರರೋಗಶಾಸ್ತ್ರ ಪ್ರಾಧ್ಯಾಪಕ ಹುದ್ದೆಯನ್ನು ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಸ್ಥಳಾಂತರ.

**ಓದಲಾಗಿದೆ:** ತಾ: 29.08.2003 ಸಂಖ್ಯೆ: ವಶ್ರೇಅ(1):2:2003-04ರ ವೈದ್ಯಕೀಯ ಶಿಕ್ಷಣ ನಿರ್ದೇಶಕರ ಪತ್ರ.

**ಪೀಠಿಕೆ:**

1) ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಡಿ.ಎಂ. ನ್ಯೂರಾಲಜಿ ಕೋರ್ಸ್‌ನ್ನು ಪ್ರಾರಂಭಿಸಲು ಕೇಂದ್ರ ಸರ್ಕಾರ ಮತ್ತು ಎಂಸಿಐಗೆ ಪ್ರಸ್ತಾವನೆಯನ್ನು ಕಳುಹಿಸಿರುವುದರಿಂದ, ಸದರಿ ವಿಭಾಗಕ್ಕೆ ಇತರೆ ಹುದ್ದೆಗಳ ಜೊತೆಗೆ 2 ಪ್ರಾಧ್ಯಾಪಕರ ಹುದ್ದೆಗಳ ಅವಶ್ಯಕತೆ ಇರುತ್ತದೆ. ಪ್ರಸ್ತುತ ಬೆಂಗಳೂರು ವೈದ್ಯಕೀಯ ಕಾಲೇಜಿನಲ್ಲಿ ಒಂದು ನರರೋಗಶಾಸ್ತ್ರ ಪ್ರಾಧ್ಯಾಪಕರ ಹುದ್ದೆ ಅಸ್ತಿತ್ವದಲ್ಲಿರುವುದರಿಂದ, ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಖಾಲಿ ಇರುವ ನರರೋಗಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯನ್ನು ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಸ್ಥಳಾಂತರ ಮಾಡುವಂತೆ ವೈದ್ಯಕೀಯ ಶಿಕ್ಷಣ ನಿರ್ದೇಶಕರು ಶಿಫಾರಸ್ಸು ಮಾಡಿದ್ದಾರೆ. ಈ ವಿಚಾರವನ್ನು ಡಿ.ಎಂ. ನ್ಯೂರಾಲಜಿ ಸೂಪರ್ ಸ್ಪೆಷಾಲಿಟಿ ಕೋರ್ಸ್‌ನ್ನು ಪ್ರಾರಂಭಿಸುವ ಬೆಳಕಿನಲ್ಲಿ ಕೂಲಂಕಷವಾಗಿ ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಆಕುಕ 50 ಎಂಎಂಸಿ 2004, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2004**

2) ಮೈಸೂರು ವೈದ್ಯಕೀಯ ಕಾಲೇಜಿನಲ್ಲಿ ಖಾಲಿ ಇರುವ ನರರೋಗಶಾಸ್ತ್ರ ಪ್ರಾಧ್ಯಾಪಕರ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಬೆಂಗಳೂರು ವೈದ್ಯಕೀಯ ಕಾಲೇಜಿಗೆ ಸ್ಥಳಾಂತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 376

**ಎಸ್. ನಾಗರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ)

## ENERGY SECRETARIAT

**Sub:** Power Bonds issued to CPSUs-Trading and servicing of over due interest.

**Read:**
1. Tripartite Agreement signed by GoK, Ministry of Power - GoI and the Reserve Bank of India on 20th March, 2003;
2. D.O. Letter No. IDMD No.2291-08/05/03/2003-04 dated 27/11/03 from the Deputy General Manager, RBI, Mumbai;
3. D.O. Letter No. FD 1241 Exp-1/03 dated 16/12/2003 from Deputy Secretary (B&R) FD addressed to the Chief General Manager RBI, Mumbai;
4. Letter No. FD/1294/Exp-1/03 dated 16/02/2004.

**PREAMBLE:**

In the D.O. letter dated 27.11.2003 read at (2) above, received from the Deputy General Manager, RBI, Mumbai; guidelines have been issued regarding trading and servicing of over due interest in respect of KPTCL dues towards CPSUs taken over by the Govt. of Karnataka in terms of theTripartite agreement dated 20th March 2003 read at (1) above. In the said letter, Reserve Bank of India also stated that the Finance Department has to furnish an authority letter for debiting the Govt.'s account with them towards payment of overdue interest in the Power bonds issued to CPSUs amounting to Rs.70.26 Crores. This is payable in three equal installments of Rs.23.42 Crores each on 16.12.2003; 16.02.2004 and 15.06.2004.

Finance Department vide its letters dated 16.12.2003 and 16.02.2004 read at (3) & (4) above issued authority letters to RBI for debiting to GoK account, the overdue interest amounting to Rs.23.42 Crores each being the first and seconds installment on 16.12.2003 and 16.02.2004. This amount has to be released from the provisions made for the RE subsidy during 2003-04 and book adjust the amount to interest payments with no cash out go involved. Hence the following order:

**Government Order No. DE 11 PSR 2001, Bangalore, Dated: 20th March 2004**

1. In the circumstances explained in the Preamble, Government are pleased to approve the following:

(i) To release Rs.23.42 Crores each as on 16.12.2003 and 16.02.2004 under the head of account 2801-80-101-1-04-106 RE subsildy (NP) and book adjust the amount to interest payments. (There is no cash out go involved); and

(ii) To authorize the Chief General Manager, RBI, Mumbai for debiting to Karnataka Govt.'s account with them towards the first and second instalment of overdue interest due as above on 16.12.2003 and 16.02.2004.

2. This issues with the concurrence of the Finance Department vide their U.O. Notes Nos.FD 1241 Exp-1/2003-04 dated 12.12.2003 and FD/2117/Exp-1/04 dated 12.03.2004.

By Order and in the name of the Governor of Karnataka,

P.R. 378

**K.L. JAYARAM**

Under Secretary to Government, Energy Department.

## ಕಾನೂನು ಸಚಿವಾಲಯ

**ವಿಷಯ:** 2003-04ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ - ಆದೇಶ

**ಓದಲಾಗಿದೆ:**
1. ಅಧಿಸೂಚನೆ ಸಂಖ್ಯೆ ಲಾ 82 ಎಲ್‌ಸಿಎಲ್ 83 ದಿನಾಂಕ 17:18-3-83.
2. ಅಧಿಸೂಚನೆ ಸಂಖ್ಯೆ ಲಾ 112 ಎಲ್‌ಸಿಎಲ್ 96 ದಿನಾಂಕ 30-10-96.
3. ಸರ್ಕಾರಿ ಆದೇಶ ಸಂಖ್ಯೆ ಲಾ 127 ಎಲ್‌ಸಿಎಲ್ 2003 ದಿನಾಂಕ 16-3-04.
4. ಸರ್ಕಾರಿ ಆದೇಶ ಸಂಖ್ಯೆ ಲಾ 139 ಎಲ್‌ಸಿಎಲ್ 2003 ದಿನಾಂಕ 11-3-04.
5. ಸರ್ಕಾರಿ ಅಧಿಸೂಚನೆ ಸಂಖ್ಯೆ ಲಾ 210 ಎಲ್‌ಸಿಎಲ್ 02 ದಿನಾಂಕ 10-7-03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ 17:18-3-03ರ ಅಧಿಸೂಚನೆಯನ್ವಯ ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ಸರ್ಕಾರದಿಂದ ಸಹಾಯಾನುದಾನ ನೀಡಲು ದಿ ಕರ್ನಾಟಕ ಗ್ರಾಂಟ್-ಇನ್-ಏಡ್-ಟು-ಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ರಚಿಸಲಾಗಿದೆ.

2003-04ನೇ ಸಾಲಿನ ಆಯವ್ಯಯದಲ್ಲಿ ರಾಜ್ಯದ ವಿವಿಧ ವಕೀಲರುಗಳ ಸಂಘಗಳಿಗೆ ಲೆಕ್ಕಶೀರ್ಷಿಕೆ 2014-00-105-0-08 (ಯೋಜನೇತರ) ಅಡಿಯಲ್ಲಿ ರೂ.25.00 ಲಕ್ಷಗಳ ಅನುದಾನವನ್ನು ಮೀಸಲಿರಿಸಿದೆ. ಈ ಮೊತ್ತವನ್ನು ಕರ್ನಾಟಕದ ವಿವಿಧ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ನಿಯಮಾವಳಿಗಳು 1983ರಲ್ಲಿ ಹಾಗೂ ತದನಂತರದ ನಿಯಮಗಳ ತಿದ್ದುಪಡಿಗಳಲ್ಲಿ

ನಿಗದಿಪಡಿಸಲಾಗಿರುವಂತೆ ಮೇಲೆ ಓದಲಾದ ಕ್ರಮಾಂಕ (2) ದಿನಾಂಕ 30-10-96ರ ಅಧಿಸೂಚನೆ ರೀತ್ಯ ಪ್ರಸಕ್ತ ಸಾಲಿಗೆ ಸರ್ಕಾರವು ವಿವಿಧ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡಬೇಕಿದ್ದುದರ ಪೈಕಿ ಮೇಲೆ ಓದಲಾದ ಕ್ರಮಾಂಕ (3)ರ ದಿನಾಂಕ 16-03-04ರ ಆದೇಶದಲ್ಲಿ ಮಂಡ್ಯ ಜಿಲ್ಲೆಯ ವಿವಿಧ ವಕೀಲರುಗಳ ಸಂಘಗಳಿಗೆ ರೂ.85,000.00ಗಳನ್ನು ಬಿಡುಗಡೆ ಮಾಡಲಾಗಿದೆ. ಮುಂದುವರಿದಂತೆ ಮೇಲೆ ಓದಲಾದ ಕ್ರಮಾಂಕ (4)ರ ದಿನಾಂಕ 11-3-04ರ ಆದೇಶದಲ್ಲಿ ಬೆಳಗಾಂ ಜಿಲ್ಲೆಯ 4 ವಕೀಲರ ಸಂಘಗಳಿಗೆ ರೂ.40,000.00 ಗಳನ್ನು ಬಿಡುಗಡೆ ಮಾಡಿ ಆದೇಶ ಹೊರಡಿಸಿದೆ ಹಾಗೂ ಮೇಲೆ ಓದಲಾದ ಕ್ರಮಾಂಕ (5)ರ ದಿನಾಂಕ 10-7-2003ರ ಅಧಿಸೂಚನೆಯಲ್ಲಿ ಬಾರ್ ಕೌನ್ಸಿಲ್‌ಗೆ ನೀಡಲಾಗುತ್ತಿದ್ದ ರೂ.1.00 ಲಕ್ಷಗಳ ಅನುದಾನಕ್ಕೆ ತಿದ್ದುಪಡಿ ತರಲಾಗಿದೆ. ಇನ್ನು ಆಯವ್ಯಯದಲ್ಲಿ ಬಾಕಿ ಉಳಿದಿರುವ ಅನುದಾನದ ಮೊತ್ತವನ್ನು ಈ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ವಿವಿಧ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡಬೇಕಿರುವುದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 27 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2004**

ಸರ್ಕಾರವು ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವಂತೆ ಸಹಾಯಾನುದಾನ ಬಿಡುಗಡೆ ಮಾಡಲು ಸಕ್ಷಮ ಪ್ರಾಧಿಕಾರಗಳಿಗೆ ಒಟ್ಟು ರೂ.21,35,000-00 (ರೂ ಇಪ್ಪತ್ತೊಂದು ಲಕ್ಷದ ಮೂವ್ವತ್ತೈದು ಸಾವಿರ ಮಾತ್ರ) ಬಿಡುಗಡೆ ಮಾಡಿದೆ.

ಸಕ್ಷಮ ಪ್ರಾಧಿಕಾರಗಳು ಅಂದರೆ ಎಲ್ಲಾ ವಿಭಾಗೀಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ಎಲ್ಲಾ ತಾಲ್ಲೂಕು ಕೆಳಮಟ್ಟದ ನ್ಯಾಯವಾದಿಗಳ ಸಂಘಗಳಿಗೆ ಸಂಬಂಧಪಟ್ಟಂತೆ ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ನ್ಯಾಯವಾದಿಗಳ ಸಂಘಗಳಿಗೆ ಅರ್ಜಿಗಳನ್ನು ಪಡೆದು ರಾಜ್ಯ ಬಾರ್ ಅಸೋಸಿಯೇಷನ್‌ಗಳಿಗೆ ಸಹಾಯಾನುದಾನ ನಿಯಮಾವಳಿಗಳು 1983ರಲ್ಲಿ ನಿಗದಿಪಡಿಸಲಾಗಿರುವಂತೆ ತ್ವರಿತವಾಗಿ ಆರ್ಥಿಕ ವರ್ಷ ಕೊನೆಗೊಳ್ಳುವ ಮುನ್ನ ಮಂಜೂರು ಮಾಡತಕ್ಕದ್ದು.

2002-03ನೇ ಸಾಲಿನಲ್ಲಿ ಸಹಾಯಾನುದಾನ ಪಡೆದಿದ್ದಾಗ್ಯೂ ಸಹಾಯಾನುದಾನದ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣ ಪತ್ರ ಪಡೆದು ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಂಜೂರು ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷ 31-3-2004ರ ನಂತರ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು.

ಈ ಸಹಾಯಾನುದಾನವನ್ನು ಲೆಕ್ಕಶೀರ್ಷಿಕೆ 2014-00-105-0-08 ವಕೀಲರು ಸಂಘ (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶದ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10-7-96ರಲ್ಲಿನ ಇಲಾಖೆಯ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜಿ.ಹೆಚ್. ನಾಗೇಂದ್ರಪ್ಪ**
ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2)

**ಅನುಬಂಧ**

**ರಾಜ್ಯದಲ್ಲಿನ ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2003-04ನೇ ಸಾಲಿಗೆ ಬಿಡುಗಡೆ ಮಾಡಿದ ಅನುದಾನದ ವಿವರಗಳು**

| ಕ್ರ. ಸಂ. | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆಗೊಳಿಸಲಾದ ಮೊತ್ತ |
|---|---|---|---|---|
| | | ಜಿಲ್ಲಾ:ವಿಭಾಗ ಮಟ್ಟದ ವಕೀಲರ ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| | **ಬೆಂಗಳೂರು (ನಗರ) ವಕೀಲರ ಸಂಘ** | | | 1,00,000.00 |
| 1) | ಬೆಂಗಳೂರು (ಗ್ರಾ) | - | 9 | 90,000.00 |
| 2) | ಕೋಲಾರ | 1 | 10 | 1,25,000.00 |
| 3) | ತುಮಕೂರು | 1 | 9 | 1,15,000.00 |
| 4) | ಮೈಸೂರು | 1(ವಿ.ಮ) | 6 | 90,000.00 |
| 5) | ಹಾಸನ | 1 | 7 | 95,000.00 |
| 6) | ಶಿವಮೊಗ್ಗ | 1 | 6 | 85,000.00 |
| 7) | ಚಿಕ್ಕಮಗಳೂರು | 1 | 6 | 85,000.00 |
| 8) | ಚಾಮರಾಜನಗರ | 1 | 3 | 55,000.00 |
| 9) | ಚಿತ್ರದುರ್ಗ | 1 | 5 | 75,000.00 |
| 10) | ದಾವಣಗೆರೆ | 1 | 5 | 75,000.00 |
| 11) | ಬಳ್ಳಾರಿ | 1 | 6 | 85,000.00 |
| 12) | ದಕ್ಷಿಣ ಕನ್ನಡ | 1 | 4 | 65,000.00 |
| 13) | ಉಡುಪಿ | 1 | 2 | 45,000.00 |

| 1 | 2 | 3 | 4 | 5 |
|---|---|---|---|---|
| 14) | ಬೆಳಗಾಂ | 1(ವಿ.ಮ) | 7 | 1,00,000.00 |
| 15) | ಧಾರವಾಡ | 1 | 3 | 55,000.00 |
| 16) | ಗದಗ್ | 1 | 4 | 65,000.00 |
| 17) | ಹಾವೇರಿ | 1 | 6 | 85,000.00 |
| 18) | ರಾಯಚೂರು | 1 | 4 | 65,000.00 |
| 19) | ಕೊಪ್ಪಳ | 1 | 3 | 55,000.00 |
| 20) | ಬೀದರ್ | 1 | 4 | 65,000.00 |
| 21) | ಉತ್ತರ ಕನ್ನಡ | 1 | 11 | 1,35,000.00 |
| 22) | ಗುಲ್ಬರ್ಗಾ | 1(ವಿ.ಮ) | 10 | 1,30,000.00 |
| 23) | ಕೊಡಗು | 1 | 2 | 45,000.00 |
| 24) | ಬಿಜಾಪುರ | 1 | 4 | 65,000.00 |
| 25) | ಬಾಗಲಕೋಟೆ | 1 | 6 | 85,000.00 |
| | | | | 21,35,000.00 |

ವಿ.ಸೂ.ರೂ.85,000 ಗಳನ್ನು ಮಂಡ್ಯ ಜಿಲ್ಲಾ ಅಧೀನದ ವಕೀಲರ ಸಂಘಗಳಿಗೂ ಹಾಗೂ ರೂ.40,000 ಗಳನ್ನು ಬೆಳಗಾಂನಲ್ಲಿನ 4 ವಕೀಲರ ಸಂಘಕ್ಕೆ ಈಗಾಗಲೇ ಬಿಡುಗಡೆ ಮಾಡಿದೆ.

**ಜಿ.ಹೆಚ್. ನಾಗೇಂದ್ರಪ್ಪ**

ಪಿ.ಆರ್. 379 ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2)

**ವಿಷಯ:** ಶ್ರೀ ಬಿ.ಎನ್. ಪಾಟೀಲ್ ನೋಟರಿ, ಚಿಂಚೋಳಿ, ಗುಲ್ಬರ್ಗಾ ಜಿಲ್ಲೆ ಇವರ ಹೆಸರನ್ನು ನೋಟರಿ ರಿಜಿಸ್ಟಾರ್‌ನಿಂದ ತೆಗೆದು ಹಾಕುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಲಾ 59 ಎಲ್‌ಸಿಎಲ್ 94, ದಿನಾಂಕ:27-6-95.
2. ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಗುಲ್ಬರ್ಗಾ ಇವರ ಪತ್ರ ದಿನಾಂಕ:21-5-03.
3. ಸರ್ಕಾರಿ ಪತ್ರ ಸಂಖ್ಯೆ:ಲಾ 86 ಎಲ್‌ಸಿಎಲ್ 03, ದಿನಾಂಕ:25-6-03.
4. ನೋಟರಿಯವರ ಲಿಖಿತ ಹೇಳಿಕೆ.
5. ಸರ್ಕಾರಿ ಸಮ ಸಂಖ್ಯೆ:ಪತ್ರ ದಿನಾಂಕ:21-11-03.
6. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರ ಪತ್ರ ದಿನಾಂಕ:22-10-03 ಮತ್ತು 21-11-03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ:27-6-95ರ ಸರ್ಕಾರಿ ಆದೇಶ ಸಂಖ್ಯೆ: ಲಾ 59 ಎಲ್‌ಸಿಎಲ್ 94ರಲ್ಲಿ ಶ್ರೀ ಬಿ.ಎನ್. ಪಾಟೀಲ್, ಇವರನ್ನು ಚಿಂಚೋಳಿ ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಿಸಲಾಗಿತ್ತು. ದಿನಾಂಕ:2-8-1995 ರಿಂದ ವೃತ್ತಿ ನಡೆಸುವಂತೆ 3 ವರ್ಷ ಅವಧಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗಿತ್ತು. ಈ ಅವಧಿಯು ನಂತರ ಸದರಿ ನೋಟರಿಯವರು 2-8-1998 ನಂತರ ವೃತ್ತಿ ಪ್ರಮಾಣ ಪತ್ರ ನವೀಕರಣ ಮಾಡಿಕೊಳ್ಳಬೇಕಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ:21-5-03ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಗುಲ್ಬರ್ಗಾ ಇವರು ನೋಟರಿಯವರ ವೃತ್ತಿ ಪ್ರಮಾಣ ಪತ್ರ ನವೀಕರಿಸುವಂತೆ ಕೋರಿ ದಿನಾಂಕ:4-7-2002ರಲ್ಲಿ ನವೀಕರಣ ಶುಲ್ಕ ಪಾವತಿಸಿರುವ ಮೂಲ ಚಲಾನ್‌ನೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಪ್ರಸ್ತಾವನೆಯಲ್ಲಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಳ್ಳುವ ದಿನಾಂಕದ ಬಗ್ಗೆ ಯಾವುದೇ ಮಾಹಿತಿ ಇರುವುದಿಲ್ಲ.

ಮೇಲೆ ಓದಲಾದ ಕ್ರಮಾಂಕ (3) ದಿನಾಂಕ:25-6-03ರ ಸರ್ಕಾರಿ ಪತ್ರದಲ್ಲಿ ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಳ್ಳುವ ದಿನಾಂಕವನ್ನಾಗಲಿ, ಹಿಂದೆ ನವೀಕರಿಸಿದ ಪ್ರಮಾಣ ಪತ್ರವನ್ನಾಗಲಿ ತ್ವರಿತವಾಗಿ ಒದಗಿಸುವಂತೆ ನೋಟರಿಯವರನ್ನು ಕೋರಲಾಗಿದೆ. ತತ್ಸಂಬಂಧ ನೋಟರಿಯವರು ತಮ್ಮ ಕಛೇರಿಗೆ ಬೆಂಕಿಬಿದ್ದು ಸಂಪೂರ್ಣ ಸುಟ್ಟು ಹೋಗಿರುವುದಾಗಿ ತಿಳಿಸಿರುತ್ತಾರೆ. ಮೇಲೆ ಓದಲಾದ ಕ್ರಮಾಂಕ (5)ರ ಸರ್ಕಾರಿ ಪತ್ರ ದಿನಾಂಕ:21-11-03 ರಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರನ್ನು ಸದರಿ ನೋಟರಿಯವರು ವೃತ್ತಿ ಪ್ರಮಾಣ ಪತ್ರ ಅವಧಿ ಅಂತ್ಯಗೊಂಡ ನಂತರವೂ ನೋಟರಿ ಕರ್ತವ್ಯ ನಿರ್ವಹಿಸಿರುವರೇ, ನೋಟರಿ ರಿಟರ್ನ್ಸ್‌ಗಳನ್ನು ಕ್ರಮಬದ್ಧವಾಗಿ ಸಲ್ಲಿಸುತ್ತಿದ್ದಾರೆಯೇ ಎಂಬ ಬಗ್ಗೆ ವರದಿ ನೀಡುವಂತೆ ಕೋರಲಾಗಿದೆ.

ಮೇಲೆ ಕ್ರಮಾಂಕ (6)ರಲ್ಲಿ ಓದಲಾದ ದಿನಾಂಕ:21-11-03 ಹಾಗೂ 22-10-03ರ ಪತ್ರಗಳಲ್ಲಿ ಸದರಿ ನೋಟರಿಯವರು ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಂಡ ನಂತರವೂ ನೋಟರಿ ಕರ್ತವ್ಯ ನಿರ್ವಹಿಸಿರುವುದು ದೃಢ ಪಟ್ಟಿದೆಯೆಂದು ಮತ್ತು ಈ ಹಿಂದೆ ನವೀಕರಿಸಿಕೊಂಡಿರುವ ಬಗ್ಗೆ ನೋಟರಿಯವರೇ ತಿಳಿಸಿರುವಂತೆ ನವೀಕರಣ ಶುಲ್ಕ ಪಾವತಿಯ ಬಗ್ಗೆ ಮೂಲ ಚಲಾನ್ ಪ್ರತಿ ಒದಗಿಸದೆ ನಕಲು ಪ್ರತಿಯೊಂದಿಗೆ ದಿನಾಂಕ:11-12-2002 ರಂದು ಮನವಿ ಸಲ್ಲಿಸಿರುವುದನ್ನು ಅವಲೋಕಿಸಿದಲ್ಲಿ 1995ರಲ್ಲಿ ನೇಮಕಗೊಂಡರೂ ಸಹ ವೃತ್ತಿ ಪ್ರಮಾಣ ಪತ್ರ ಅವಧಿ ಅಂತ್ಯಗೊಂಡ ನಂತರ ನವೀಕರಿಸಿಕೊಳ್ಳದೆ ಇದುವರೆಗೂ ನೋಟರಿ ಕರ್ತವ್ಯ ನಿರ್ವಹಿಸಿರುವುದು ದೃಢ ಪಟ್ಟಿದೆಯೆಂದು ಮತ್ತು ಸಂಬಂಧಿತ ನೋಟರಿ ರಿಜಿಸ್ಟರ್‌ಗಳ ಬದಲಿಗೆ 1995,1996,1998 ನ್ನು ಮಾತ್ರ ಒದಗಿಸಿರುವುದಾಗಿ ತಿಳಿಸಿರುತ್ತಾರೆ.

ಮೇಲಿನ ಅಂಶಗಳ ಆಧಾರದ ಮೇಲೆ ಶ್ರೀ ಬಿ.ಎನ್. ಪಾಟೀಲ್ ನೋಟರಿ, ಚಿಂಚೋಳಿ ಇವರು ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಂಡ ದಿನಾಂಕ:2-8-1998 ರಿಂದ ಇದುವರೆವಿಗೂ ನವೀಕರಿಸಿಕೊಳ್ಳದೆ ನೋಟರಿ ಕರ್ತವ್ಯ ನಿರ್ವಹಿಸಿ ನೋಟರಿ ಕಾಯ್ದೆ 9(1)ನ್ನು ಉಲ್ಲಂಘಿಸಿರುವುದು ಧೃಡಪಟ್ಟಿರುತ್ತದೆ. ಆದರನ್ವಯ ಸರ್ಕಾರವು ಪರಿಶೀಲಿಸಿ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 86 ಎಲ್‌ಸಿಎಲ್ 2003, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2004**

ಶ್ರೀ ಬಿ.ಎನ್. ಪಾಟೀಲ್, ನೋಟರಿ, ಚಿಂಚೋಳಿ, ಗುಲ್ಬರ್ಗಾ ಇವರು ದಿನಾಂಕ:2-8-98 ರಂದು ಅಂತ್ಯಗೊಂಡ ನಂತರ ವೃತ್ತಿ ಪ್ರಮಾಣ ಪತ್ರವನ್ನು ನವೀಕರಿಸಿಕೊಳ್ಳದೆ ಇಲ್ಲಿಯವರೆವಿಗೂ ನೋಟರಿ ಕರ್ತವ್ಯ ನಿರ್ವಹಿಸಿ ನೋಟರಿ ಕಾಯ್ದೆ 9(1)ನ್ನು ಉಲ್ಲಂಘಿಸಿರುವುದು ದೃಢ ಪಟ್ಟಿರುತ್ತದೆ. ಆದ್ದರಿಂದ ನೋಟರಿ ನಿಯಮಾವಳಿಗಳು 1956ರ ನಿಯಮ 13(12)ಬಿ(1) ರೀತ್ಯ ಸದರಿ ನೋಟರಿಯವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 380

**ಜಿ.ಹೆಚ್. ನಾಗೇಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ, ಕಾನೂನು ಇಲಾಖೆ (ಆಡಳಿತ-2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಆರ್.ಎನ್.ಕೃಷ್ಣಸ್ವಾಮಿ, ಶಿರಸ್ತೆದಾರ್ (ನಿವೃತ್ತ) ಮತ್ತು ಶ್ರೀ ಬಿ. ಮಾಲೂರಯ್ಯ, ಪ್ರ.ದ.ಸ (ನಿವೃತ್ತ) ಇವರುಗಳ ವಿರುದ್ಧ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**

೧. ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ ೫೨ ಎಸ್‌ಇಎನ್ ೯೭ ಬೆಂಗಳೂರು, ದಿನಾಂಕ ೧೬.೧೧.೨೦೦೦.

೨. ಶ್ರೀ ಬಿ.ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ಅವರ ದಿನಾಂಕ ೧.೪.೨೦೦೩ರ ವಿಚಾರಣಾ ವರದಿ.

೩. ನೋಟೀಸ್ ಕ್ರಮಾಂಕ ಸಿಆಸುಇ ೫೨ ಎಸ್‌ಇಎನ್ ೯೭ ದಿನಾಂಕ ೧೪.೧೦.೦೩.

೪. ಶ್ರೀ ಆರ್.ಎನ್.ಕೃಷ್ಣಸ್ವಾಮಿ ಅವರ ದಿನಾಂಕ ೧೦.೧೧.೦೩ರ ಉತ್ತರ

೫. ಶ್ರೀ ಬಿ.ಮಾಲೂರಯ್ಯ ಅವರ ದಿನಾಂಕ ೧೦.೧೧.೦೩ರ ಉತ್ತರ

೬. ಕಾರ್ಯದರ್ಶಿ, ಕರ್ನಾಟಕ ಲೋಕ ಸೇವಾ ಆಯೋಗ ರವರ ಪತ್ರ ಕ್ರಮಾಂಕ ಪಿಎಸ್‌ಸಿ ೧೫೩ ಸಿಎನ್‌ಎಸ್ ೦೩ ದಿ.೨೫.೨.೦೪

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆ, ದೇವನಹಳ್ಳಿ ತಾಲ್ಲೂಕು ಕುಂದಾಣ ಹೋಬಳಿ ರಾಜಸ್ವ ನಿರೀಕ್ಷಕರಾಗಿ ಹಾಗೂ ತಾಲ್ಲೂಕು ಕಛೇರಿಯಲ್ಲಿ ಎರಡನೇ ದರ್ಜೆ ಸಹಾಯಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ತಾಲ್ಲೂಕಿನ ಕುಂದಾಣಿ ಹೋಬಳಿ, ಕೊಟ್ಟಿಗೆ ತಿಮ್ಮೇನಹಳ್ಳಿ ಗ್ರಾಮದ ಸರ್ವೆ ನಂಬರ್ ೯,೧೦,೧೧,೧೨ ಮತ್ತು ೧೩ ರಲ್ಲಿ ಬರುವ ಕೆಲವು ಜಮೀನುಗಳನ್ನು ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತನೆ ಮಾಡಲು ಶಿಫಾರಸ್ಸು ಮಾಡುವಾಗ ಕಾಯಿದೆ/ನಿಯಮಗಳನ್ನು ಉಲ್ಲಂಘಿಸಿದ ಹಾಗೂ ವಿಧಿವಿಧಾನಗಳನ್ನು ಪಾಲಿಸದ ಆರೋಪಕ್ಕಾಗಿ ಅಂದಿನ ತಹಸೀಲ್ದಾರರೊಡನೆ ಶ್ರೀ ಆರ್.ಎನ್.ಕೃಷ್ಣಸ್ವಾಮಿ, ನಿವೃತ್ತ ಶಿರಸ್ತೆದಾರ್ ಹಾಗೂ ಶ್ರೀ ಬಿ.ಮಾಲೂರಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕರುಗಳ ವಿರುದ್ಧವೂ ಸಹ ಮೇಲೆ (೧) ರಲ್ಲಿ ಓದಲಾದ ದಿನಾಂಕ ೧೬.೧೧.೨೦೦೦ದ ಸರ್ಕಾರಿ ಆದೇಶದಲ್ಲಿ ಜಂಟಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಬಿ.ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (೨) ರಲ್ಲಿ ಓದಲಾದ ದಿನಾಂಕ ೧.೪.೨೦೦೩ ರ ವಿಚಾರಣಾ ವರದಿ ಸಲ್ಲಿಸಿ ಆರೋಪ ಕುರಿತಂತೆ ಈ ಕೆಳಕಂಡ ನಿರ್ಣಯ ನೀಡಿದರು:

ಶ್ರೀಮತಿ ಲೀಲಾ ಗೋಪಾಲದಾಸ್ ಜಗತ್ತಿಯಾನಿ ಎಂಬುವವರು ತಾಲ್ಲೂಕಿನ ಕೊಟ್ಟಿಗೆ ತಿಮ್ಮೇನಹಳ್ಳಿ ಗ್ರಾಮದ ಸರ್ವೆ ನಂಬರ್ ೯,೧೦,೧೧,೧೨ ಮತ್ತು ೧೩ ರಲ್ಲಿ ಬರುವ ಜಮೀನುಗಳ ಭೂ ಪರಿವರ್ತನಾ ಅರ್ಜಿಯನ್ನು ೩೧.೭.೧೯೮೯ ಹಾಗೂ ೨೭.೮.೧೯೯೦ ರಂದು ತಾಲ್ಲೂಕು ಕಛೇರಿಗೆ ಸಲ್ಲಿಸಿದ್ದಾರೆ. ಕೊಟ್ಟಿಗೆ ತಿಮ್ಮೇನಹಳ್ಳಿ ಗ್ರಾಮದ ಸರ್ವೆ ನಂಬರ್ ೯ ರಲ್ಲಿ ೫ ಎಕರೆ ೩ ಗುಂಟೆ, ಸರ್ವೆ ನಂಬರ್ ೧೦ ರಲ್ಲಿ ೫ ಎಕರೆ ೩ ಗುಂಟೆ ಮತ್ತು ಸರ್ವೆ ನಂಬರ್ ೧೦,೧೧,೧೨ ರಲ್ಲಿ ೧೨ ಎಕರೆ ೩೨ ಗುಂಟೆ ಜಮೀನುಗಳಲ್ಲಿ ಕಾರ್ಮಿಕರ ವಸತಿಗಾಗಿ ಮನೆಗಳನ್ನು ನಿರ್ಮಿಸಲು ಭೂ ಪರಿವರ್ತನೆ ಮಾಡಿಕೊಡುವಂತೆ ಕೋರಿದ್ದಾರೆ. ಈ ಹಿಂದೆ ಸರ್ವೆ ನಂಬರ್ ೯ರ ೫ ಎಕರೆ ೩ ಗುಂಟೆ ಬಗ್ಗೆ ೧೩.೧೧.೧೯೮೯ ರಲ್ಲಿ ಅರ್ಜಿದಾರರಿಗೆ ಹಿಂಬರಹ ನೀಡಿ ನಗರ ಯೋಜನಾ ಇಲಾಖೆಯವರು ಭೂ ಪರಿವರ್ತನೆ ಮಂಜೂರಾತಿಗೆ ಶಿಫಾರಸ್ಸು ಮಾಡಿಲ್ಲ ಎಂಬ ಆಧಾರದ ಮೇಲೆ ಕೋರಿಕೆಯನ್ನು ತಿರಸ್ಕರಿಸಿದ್ದಾರೆ ಹಾಗೂ ಅಧಿಕೃತ ದಾಖಲೆಗಳನ್ನು ಹಾಜರು ಪಡಿಸಿದಲ್ಲಿ ಕೋರಿಕೆಯನ್ನು ಪರಿಗಣಿಸುವುದಾಗಿ ತಿಳಿಸಿದ್ದಾರೆ. ಆದರೆ ೨೦.೧೨.೧೯೮೯ ರಂದು ಮತ್ತೊಂದು ಅರ್ಜಿ ಪಡೆದು ನಗರ ಯೋಜನೆ ಇಲಾಖೆಯ ಅಭಿಪ್ರಾಯವಿಲ್ಲದೇ ಹಾಗೂ ಅಧಿಕೃತ ದಾಖಲೆಗಳಿಲ್ಲದೆ ಭೂ ಪರಿವರ್ತನೆಗೆ ಆರೋಪಿಗಳಿಬ್ಬರೂ ಶಿಫಾರಸ್ಸು ಮಾಡಿದ್ದಾರೆ. ಹಾಗೆಯೇ ಸರ್ವೆ ನಂಬರ್ ೧೦ರ ೫ ಎಕರೆ ೩ ಗುಂಟೆ ಜಮೀನಿನ ಬಗ್ಗೆಯೂ ದಿನಾಂಕ ೨೭.೮.೧೯೯೦ ರಂದು ಸಲ್ಲಿಸಿದ ಅರ್ಜಿ ಮೇಲೆ ಗ್ರಾಮ ಪಂಚಾಯಿತಿ ಅಭಿಪ್ರಾಯ ಪಡೆಯಬೇಕೆಂದು ತಿಳಿಸಿದ್ದರೂ ಅನಂತರ ಪಡೆಯದೆ ಭೂ ಪರಿವರ್ತನೆಗೆ ಶಿಫಾರಸ್ಸು ಮಾಡಿ ಅದರಂತೆ ದಿನಾಂಕ ೧೮.೧೦.೧೯೯೦ ರಂದು ಆದೇಶ ಹೊರಡಿಸಿದೆ. ಸರ್ವೆ ನಂಬರ್ ೧೧,೧೨, ೧೩ರ ಒಟ್ಟು ೧೨ ಎಕರೆ ೩೨ ಗುಂಟೆ ಬಗ್ಗೆ ೭.೧೧.೧೯೯೦ ರಂದು ಅರ್ಜಿ ಪಡೆದು ನಗರ ಯೋಜನೆ ಆಯುಕ್ತರ ಅಭಿಪ್ರಾಯ ಪಡೆಯದೇ ಭೂ ಪರಿವರ್ತನೆಗೆ ಆರೋಪಿಗಳು ಶಿಫಾರಸ್ಸು ಮಾಡಿದ್ದು ನಾಲ್ಕು ಆರೋಪಗಳ ಪೈಕಿ ಮೂರು ಸಾಭೀತಾಗಿವೆ.

ಇಲಾಖಾ ವಿಚಾರಣೆ ಜಾರಿಯಲ್ಲಿದ್ದಾಗ ಶ್ರೀ ಆರ್.ಎನ್.ಕೃಷ್ಣಸ್ವಾಮಿ, ಶಿರಸ್ತೆದಾರ್ ಹಾಗೂ ಶ್ರೀ ಬಿ.ಮಾಲೂರಯ್ಯ, ಪ್ರಥಮ ದರ್ಜೆ ಸಹಾಯಕರುಗಳು ವಯೋನಿವೃತ್ತಿ ಹೊಂದಿದರು. ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು ಹಾಗೂ ಸಾಬೀತಾದ ಆರೋಪಗಳ ತೀವ್ರತೆಗೆ ಅನುಗುಣವಾಗಿ ಶ್ರೀ ಆರ್.ಎನ್.ಕೃಷ್ಣಸ್ವಾಮಿ, ನಿವೃತ್ತ ಶಿರಸ್ತೆದಾರರ ಮಾಸಿಕ ವಿಶ್ರಾಂತಿ ವೇತನದಿಂದ

ರೂ.೩೦೦/- ಗಳನ್ನೂ ಶ್ರೀ ಬಿ.ಮಾಲೂರಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕರ ಮಾಸಿಕ ವಿಶ್ರಾಂತಿ ವೇತನದಿಂದ ರೂ.೨೦೦/- ಗಳನ್ನೂ ಒಂದು ವರ್ಷ ಕಾಲ ಏಕೆ ಕಡಿತಗೊಳಿಸಬಾರದೆಂಬುದಕ್ಕೆ ವಿವರಣೆ ಕೇಳಿ ಅವರಿಬ್ಬರಿಗೂ ಮೇಲೆ (೩) ರಲ್ಲಿ ಓದಲಾದ ದಿನಾಂಕ ೧೪.೧೦.೨೦೦೩ರ ಎರಡನೇ ನೋಟೀಸ್ ನೀಡಲಾಯಿತು. ಈ ನೋಟೀಸ್‌ಗೆ ಇಬ್ಬರೂ ಸಹ ಮೇಲೆ ೪ ಮತ್ತು ೫ ರಲ್ಲಿ ಓದಲಾದ ದಿನಾಂಕ ೧೦.೧೧.೨೦೦೩ರ ಉತ್ತರ ಸಲ್ಲಿಸಿದ್ದಾರೆ ರಾಜಸ್ವ ನಿರೀಕ್ಷಕನಾಗಿ ತನ್ನ ವ್ಯಾಪ್ತಿಯಲ್ಲಿನ ಅಂಶದ ಬಗ್ಗೆ ಕಡತ ತಯಾರಿಸಿ ತನ್ನ ವರದಿಯೊಡನೆ ಸಲ್ಲಿಸಿದ್ದು ಅದು ಒಪ್ಪಿಗೆ ಆಗದಿದ್ದಲ್ಲಿ ತಹಸೀಲ್ದಾರರು ಮರು ತನಿಖೆಗೆ ಆದೇಶಿಸಬೇಕಿತ್ತು. ಇಲ್ಲವೇ ತಾವೇ ತನಿಖೆ ನಡೆಸಿ ತೀರ್ಮಾನ ತೆಗೆದುಕೊಳ್ಳಬೇಕಿತ್ತು. ತಾನು ನೀಡಿರತಕ್ಕ ವರದಿಯು ಯಾವ ರೀತಿಯಲ್ಲೂ ಕಾನೂನು ಬಾಹಿರವಾಗಿರಲಿಲ್ಲದ ಕಾರಣ ತಮ್ಮನ್ನು ಹೊಣೆ ಮಾಡಲು ಬರುವುದಿಲ್ಲ. ಆದ್ದರಿಂದ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳದೇ ಆರೋಪ ಮುಕ್ತರನ್ನಾಗಿಸಲು ಶ್ರೀ ಆರ್.ಎನ್.ಕೃಷ್ಣಸ್ವಾಮಿ ಅವರು ಕೋರಿದ್ದಾರೆ. ತಾನು ಸಾಮಾನ್ಯ ಎರಡನೇ ದರ್ಜೆ ಸಹಾಯಕನಾಗಿದ್ದು ರಾಜಸ್ವ ನಿರೀಕ್ಷಕರಿಂದ ಸ್ಥಳದ ವಿದ್ಯಮಾನ ಕುರಿತು ಬಂದ ವರದಿಯನ್ನು ತನ್ನ ಸಲಹೆಯೊಡನೆ ಮೇಲಧಿಕಾರಿಗಳಿಗೆ ಸಲ್ಲಿಸಿದ್ದೆ. ಮೇಲಧಿಕಾರಿಗಳಿಗೆ ಅದು ಸಮ್ಮತಿಯಾಗದಿದ್ದಲ್ಲಿ ಬೇರೆ ಆದೇಶಿಸಬಹುದಿತ್ತು. ಇದರಲ್ಲಿ ತನ್ನ ದೋಷ ಇರದ ಕಾರಣ ವಿಚಾರಣಾ ವರದಿಯನ್ನು ಒಪ್ಪಿಕೊಳ್ಳದೇ ಆರೋಪ ಮುಕ್ತರನ್ನಾಗಿಸುವಂತೆ ಶ್ರೀ ಬಿ.ಮಾಲೂರಯ್ಯ ಅವರು ಕೋರಿದ್ದಾರೆ.

ಆರೋಪಿಗಳ ಉತ್ತರದಿಂದಾಗಿ ಪ್ರಕರಣವನ್ನು ಮತ್ತೆ ಪರಿಶೀಲಿಸಲಾಗಿದೆ. ತನ್ನ ಶಿಫಾರಸ್ಸನ್ನು ಕಡ್ಡಾಯವಾಗಿ ಒಪ್ಪಲೇಬೇಕಿಲ್ಲ. ಮೇಲಾಧಿಕಾರಿಗಳು ತಮ್ಮದೇ ಆದ ತನಿಖೆ ನಡೆಸಲು ಅವಕಾಶವಿದೆ ಎಂಬ ನಿಲುವನ್ನು ತಳೆದು ಸ್ಥಳ ತಪಾಸಣಾ ವರದಿಯನ್ನು ಸರಿಯಾಗಿ ಕಳುಹಿಸದೇ ವಾಸ್ತವಾಂಶಗಳಿಂದ ದೂರವಾದ ಮಾಹಿತಿ ನೀಡುವುದು ಸರ್ಕಾರಿ ನೌಕರರಿಗೆ ಸರಿಯಲ್ಲದ ವರ್ತನೆಯಾಗಿದೆ. ಆರೋಪಿತರಿಬ್ಬರೂ ಈ ದುರ್ನಡತೆ ಎಸಗಿರುವುದು ವಿಚಾರಣಾ ವರದಿ ಹಾಗೂ ಎರಡನೇ ಕಾರಣ ಕೇಳುವ ನೋಟೀಸ್‌ಗೆ ಅವರುಗಳ ಉತ್ತರದ ದಾಟಿಯಿಂದಲೇ ವ್ಯಕ್ತವಾಗುತ್ತದೆ. ಆದ್ದರಿಂದ ಆರೋಪಿಗಳ ಉತ್ತರವನ್ನು ಒಪ್ಪಿಕೊಳ್ಳದೇ ಆರೋಪಗಳು ಸಾಬೀತಾಗಿವೆ ಎಂಬ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಆರೋಪಿಗಳಿಗೆ ದಂಡನೆ ವಿಧಿಸಲು ಕರ್ನಾಟಕ ಲೋಕ ಸೇವಾ ಆಯೋಗದ ಸಹಮತಿಯೊಡನೆ ಸರ್ಕಾರವು ತೀರ್ಮಾನಿಸಿ ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಕ್ರಮಾಂಕ ಸಿಆಸುಇ ೫೨ ಎಸ್‌ಇಎನ್ ೯೭, ಬೆಂಗಳೂರು, ದಿನಾಂಕ ೨೨ನೇ ಮಾರ್ಚ್ ೨೦೦೪.**

ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಯ ೨೧೪ ನೇ ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಆರ್.ಎನ್.ಕೃಷ್ಣಸ್ವಾಮಿ, ನಿವೃತ್ತ ಶಿರಸ್ತೆದಾರ್ ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ.೩೦೦/- ಗಳನ್ನು ಹಾಗೂ ಶ್ರೀ ಬಿ.ಮಾಲೂರಯ್ಯ, ನಿವೃತ್ತ ಪ್ರಥಮ ದರ್ಜೆ ಸಹಾಯಕ ಅವರ ಮಾಸಿಕ ವಿಶ್ರಾಂತಿ ವೇತನದಿಂದ ರೂ.೨೦೦/- ಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಕಡಿತಗೊಳಿಸಬೇಕೆಂದು ಈ ಮೂಲಕ ಆದೇಶಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 381

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-೩).

**ಶಿಕ್ಷಣ ಸಚಿವಾಲಯ**

**ಸುತ್ತೋಲೆ**

**ಕ್ರಮಾಂಕ: ಇಡಿ 56 ಯುಬಿವಿ 2004, ಬೆಂಗಳೂರು, ದಿನಾಂಕ: 23ನೇ ಮಾರ್ಚ್ 2004**

**ವಿಷಯ:** ಪದವಿ ಕೋರ್ಸುಗಳಲ್ಲಿ ಸ್ಪಾಸ್ಟಿಕ್, ಶ್ರವಣದೋಷವುಳ್ಳವರು, ಕಲಿಕೆ ನ್ಯೂನ್ಯತೆ ಬುದ್ಧಿಮಾಂದ್ಯ ವಿದ್ಯಾರ್ಥಿಗಳಿಗೆ ಭಾಷಾ/ಪರೀಕ್ಷೆಯಿಂದ ವಿನಾಯಿತಿ ನೀಡುವ ಬಗ್ಗೆ.

**ಉಲ್ಲೇಖ:** ದಿನಾಂಕ: 20-03-2004 ಸಂಖ್ಯೆ: ಅಂಅನಿ/ಆಸ್ವಿ ಅನು04/03-04ರ ಅಂಗವಿಕಲರ ಅಧಿನಿಯಮ ಆಯುಕ್ತರ ಪತ್ರ.

1) ಸ್ಪಾಸ್ಟಿಕ್, ಶ್ರವಣದೋಷವುಳ್ಳವರು, ಕಲಿಕೆ ನ್ಯೂನ್ಯತೆ, ಬುದ್ಧಿಮಾಂದ್ಯ ವಿದ್ಯಾರ್ಥಿಗಳಿಗೆ ಪ್ರೈಮರಿ, ಪ್ರೌಢ ಶಿಕ್ಷಣ ಮತ್ತು ಪಿಯುಸಿಯಲ್ಲಿ ಶಿಕ್ಷಣ ಮಾಧ್ಯಮದ ಒಂದು ಭಾಷೆಯನ್ನು ಮಾತ್ರ ತೆಗೆದುಕೊಳ್ಳಲು ಅವಕಾಶವಿದ್ದು, ಉಳಿದ ಎರಡು ಭಾಷೆಗಳಲ್ಲಿ ವಿನಾಯಿತಿ ನೀಡಲಾಗಿರುತ್ತದೆ. ಇಂತಹ ವಿದ್ಯಾರ್ಥಿಗಳಿಗೆ ಪ್ರೈಮರಿ, ಪ್ರೌಢ ಶಿಕ್ಷಣ ಮತ್ತು ಪಿಯುಸಿ ತರಗತಿಯಲ್ಲಿ ಭಾಷಾ ಕಲಿಕೆಯಿಂದ ನೀಡಲಾಗಿರುವ ಈ ವಿನಾಯಿತಿಯನ್ನು ಪದವಿ ತರಗತಿಗಳಿಗೂ ಸಹ ವಿಸ್ತರಿಸಲು ಮನವಿಗಳು ಸ್ವೀಕೃತವಾಗಿವೆ.

2) ಇಂತಹ ವಿದ್ಯಾರ್ಥಿಗಳಿಗೆ ಪದವಿ ಕೋರ್ಸುಗಳಲ್ಲಿ ಭಾಷಾ ಕಲಿಕೆಯಿಂದ ವಿನಾಯಿತಿ ನೀಡುವ ವಿಷಯವನ್ನು ಅಂಗವಿಕಲರ ಧಿನಿಯಮದ ಆಯುಕ್ತರಿಂದ ಸ್ವೀಕೃತವಾಗಿರುವ ಪ್ರಸ್ತಾವನೆಯ ಹಿನ್ನೆಲೆಯಲ್ಲಿ ಪರಿಶೀಲಿಸಲಾಗಿದೆ. ಸ್ಪಾಸ್ಟಿಕ್, ಶ್ರವಣದೋಷವುಳ್ಳವರು, ಕಲಿಕೆ ನ್ಯೂನ್ಯತೆ, ಬುದ್ಧಿಮಾಂದ್ಯ ವಿದ್ಯಾರ್ಥಿಗಳಿಗೆ ಪ್ರೈಮರಿ, ಪ್ರೌಢ ಶಿಕ್ಷಣ ಮತ್ತು ಪಿಯುಸಿ ತರಗತಿಯಲ್ಲಿ ಭಾಷಾ ಕಲಿಕೆಯಿಂದ ವಿನಾಯಿತಿ ನೀಡಲಾಗಿರುವುದರಿಂದ ಪದವಿ ಕೋರ್ಸುಗಳಲ್ಲಿ ಭಾಷೆ ಅಭ್ಯಾಸ ಮಾಡುವುದು ಪ್ರಾಯೋಗಿಕವಾಗಿ ಸೂಕ್ತವೆಂದು ಕಂಡುಬರುವುದಿಲ್ಲ. ಆದ್ದರಿಂದ ಇಂತಹ ಮಕ್ಕಳ ವಿದ್ಯಾಭ್ಯಾಸದ ಹಿತದೃಷ್ಟಿಯಿಂದ ಈಗಾಗಲೇ ಪ್ರೌಢ ಮತ್ತು ಪದವಿ ಪೂರ್ವ ಶಿಕ್ಷಣದಲ್ಲಿ ನೀಡಲಾಗಿರುವ ಭಾಷಾ ವಿನಾಯಿತಿ ಸೌಲಭ್ಯವನ್ನು ಪದವಿ ಕೋರ್ಸುಗಳಿಗೂ ಸಹ ವಿಸ್ತರಿಸುವ ಬಗ್ಗೆ ಪರಿಶೀಲಿಸಲಾಗಿದೆ.

3) ಬಿಎ/ಬಿಎಸ್ಸಿ/ಬಿ.ಕಾಂ ಹಾಗೂ ಇತರ ಪದವಿ ಕೋರ್ಸುಗಳಲ್ಲಿ ಅಭ್ಯಾಸ ಮಾಡುತ್ತಿರುವ ಸ್ಪಾಸ್ಟಿಕ್, ಶ್ರವಣದೋಷವುಳ್ಳವರು, ಕಲಿಕೆ ನ್ಯೂನ್ಯತೆ ಬುದ್ಧಿಮಾಂದ್ಯ ವಿದ್ಯಾರ್ಥಿಗಳಿಗೆ ಎಲ್ಲಾ ಪದವಿ ಕೋರ್ಸುಗಳಲ್ಲಿ ಪ್ರಥಮ ಮತ್ತು ದ್ವಿತೀಯ ವರ್ಷದ ಎರಡನೇ ಭಾಷೆಯನ್ನು ಅಭ್ಯಾಸ ಮಾಡುವುದರಿಂದ ಹಾಗೂ ಸದರಿ ಭಾಷಾ ಪರೀಕ್ಷೆಯಿಂದ ವಿನಾಯಿತಿ ನೀಡುವಂತೆ ಈ ಮೂಲಕ ಎಲ್ಲಾ ವಿಶ್ವವಿದ್ಯಾಲಯಗಳಿಗೆ ಸೂಚಿಸಲಾಗಿದೆ.

**ಸುಂದರ ರಾಜ ಗುಪ್ತ**

ಪಿ.ಆರ್. 382

ಸರ್ಕಾರದ ಅಧೀನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯ)

## ಸುತ್ತೋಲೆ

**ಸಂಖ್ಯೆ: ಇಡಿ 15 ಯುಎನ್‌ಇ 2004, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2004**

ಪದವಿ ಪರೀಕ್ಷೆ ಮತ್ತು ಸ್ನಾತಕೋತ್ತರ ಪರೀಕ್ಷೆ ಬರೆಯುವ ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳು ತಮಗೆ ಇಚ್ಛೆಯುಳ್ಳ, ವಿದ್ಯಾರ್ಹತೆ ಮಿತಿಗೆ ಒಳಪಡದಂತಹ ಬರಹಗಾರರನ್ನು ಉಪಯೋಗಿಸಿಕೊಳ್ಳಲು ಅನುಮತಿ ನೀಡುವ ಬಗ್ಗೆ ಹೊರಡಿಸಲಾದ ಇಡಿ 15 ಯುಎನ್‌ಇ 2004 ದಿ:5-3-2004ರ ಸುತ್ತೋಲೆಯ ಮುಂದುವರಿಕೆಯಾಗಿ ಈ ಕೆಳಕಂಡಂತೆ ನಿರ್ದೇಶನಗಳನ್ನು ನೀಡಲಾಗಿದೆ.

1) ಅಂಗವಿಕಲರು ಮತ್ತು ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳು ಬರಹಗಾರರ ಸಹಾಯಕ್ಕಾಗಿ ಮುಂಚಿತವಾಗಿ ತಾವು ಓದುತ್ತಿರುವ ಕಾಲೇಜಿನ ಪ್ರಾಂಶುಪಾಲರಿಗೆ ಅರ್ಜಿ ಸಲ್ಲಿಸಿ ಅನುಮತಿಯನ್ನು ಪಡೆದುಕೊಂಡಿರತಕ್ಕದ್ದು ಮತ್ತು ಈ ಕೋರಿಕೆಯ ಜೊತೆಗೆ ಅಂಗವಿಕಲತೆಯ ಬಗ್ಗೆ ವೈದ್ಯಕೀಯ ಪ್ರಮಾಣ ಪತ್ರವನ್ನು ಲಗತ್ತಿಸತಕ್ಕದ್ದು.

2) ಬರಹಗಾರರ ಸಹಾಯವನ್ನು ಪಡೆದುಕೊಳ್ಳಲು ಇಚ್ಛಿಸುವ ವಿದ್ಯಾರ್ಥಿಗಳು ಪರೀಕ್ಷಾ ವೇಳೆಗಿಂತ ಒಂದು ಗಂಟೆ ಮುಂಚಿತವಾಗಿ ಬರಹಗಾರರ ವಿವರಗಳನ್ನು ಕಾಲೇಜಿನ ಪ್ರಾಂಶುಪಾಲರಿಗೆ ತಿಳಿಸಿ ಪೂರ್ವಾನುಮತಿ ಪಡೆಯುವುದು.

3) ಬರಹಗಾರರ ವಿದ್ಯಾರ್ಹತೆಯು ಅಂಗವಿಕಲ ಮತ್ತು ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳಿಗಿಂತ ಕಡಿಮೆ ವಿದ್ಯಾರ್ಹತೆ ಇರಬೇಕೆಂಬುದಾಗಿ ಏನೂ ಇಲ್ಲ. ಬರಹಗಾರರ ವಿದ್ಯಾರ್ಹತೆಯು ಹೆಚ್ಚಿಗೆ ಇದ್ದರೂ ಸಹ, ಅದು ಅಂಗವಿಕಲ ಮತ್ತು ದೃಷ್ಟಿದೋಷವುಳ್ಳ ವಿದ್ಯಾರ್ಥಿಗಳು ತೆಗೆದುಕೊಳ್ಳುತ್ತಿರುವ ಪರೀಕ್ಷೆಯಲ್ಲಿನ ವಿಷಯಗಳು ಒಂದೇ ಆಗಿರಬಾರದು. ಉದಾಹರಣೆಗೆ ಒಬ್ಬ ಬಿ.ಎ. ಅಥವಾ ಎಂ.ಎ. ವಿದ್ಯಾರ್ಹತೆ ಹೊಂದಿರತಕ್ಕ ಬರಹಗಾರನು ಬಿ.ಎಸ್ಸಿ ಪರೀಕ್ಷೆ ತೆಗೆದುಕೊಳ್ಳುತ್ತಿರುವ ಅಂಗವಿಕಲ ಮತ್ತು ದೃಷ್ಟಿದೋಷವುಳ್ಳ ವಿದ್ಯಾರ್ಥಿಗೆ ಬರಹಗಾರನಾಗಬಹುದು.

4) ಯಾವುದಾದರೂ ಒಂದು ಅಥವಾ ಹೆಚ್ಚಿನ ಅಂಗವಿಕಲತೆಯ ತೊಂದರೆಯಿಂದ ನರಳುತ್ತಿರುವ ಹಾಗೂ ದೃಷ್ಟಿ ಹಾಗೂ ಶ್ರವಣ ವೈಕಲ್ಯತೆ ಇರುವ ಅಭ್ಯರ್ಥಿಗಳಿಗೆ ಹೆಚ್ಚಿನ ಸಮಯಾವಕಾಶ ನೀಡುವುದು ಅಗತ್ಯವಾಗಿರುತ್ತದೆ. ಮೂರು ಗಂಟೆಯ ಅವಧಿಯ ಪ್ರಶ್ನೆ ಪತ್ರಿಕೆಗೆ ಗಂಟೆಗೆ 20 ನಿಮಿಷಗಳಂತೆ ಒಂದು ಗಂಟೆ ಹೆಚ್ಚಿನ ಸಮಯಾವಕಾಶ ನೀಡುವುದು. ಈ ಸೌಲಭ್ಯವನ್ನು ಬರಹಗಾರರ ಸೌಲಭ್ಯಗಳನ್ನು ಉಪಯೋಗಿಸಿಕೊಳ್ಳುವ ವಿದ್ಯಾರ್ಥಿಗಳಿಗೂ ಕೂಡಾ ಒದಗಿಸುವುದು.

5) ಶ್ರವಣ ದೋಷವುಳ್ಳ ವಿದ್ಯಾರ್ಥಿಗಳಿಗೆ ಭಾಷಾ ಸಮಸ್ಯೆ ಇರುವುದರಿಂದ ಪರೀಕ್ಷೆ ಬರೆಯುವಲ್ಲಿ ವ್ಯಾಕರಣ, ವಾಕ್ಯ ರಚನಾ ದೋಷಗಳು ಆಗುವ ಸಾಧ್ಯತೆ ಇರುವುದನ್ನು ಪರಿಗಣಿಸಿ ಉತ್ತರ ಪತ್ರಿಕೆಯ ಮೌಲ್ಯ ಮಾಪಕರು ಅಂತಹ ವಿದ್ಯಾರ್ಥಿಗಳ ಉತ್ತರ ಪತ್ರಿಕೆಯನ್ನು ಗುರ್ತಿಸಿ, ತಾಳ್ಮೆಯಿಂದ ಮೌಲ್ಯಮಾಪನ ಮಾಡಲು ಅನುಕೂಲವಾಗುವಂತೆ ಶ್ರವಣ ದೋಷವುಳ್ಳ ವಿದ್ಯಾರ್ಥಿಗಳ ಉತ್ತರ ಪತ್ರಿಕೆಗಳಿಗೆ ಹಸಿರು ಬಣ್ಣದ ಸ್ಟಿಕರ್ ಅಂಟಿಸುವಲ್ಲಿ ಕ್ರಮ ತೆಗೆದುಕೊಳ್ಳುವುದು.

**ಶೋಭಾ ನಂಬೀಶನ್**

ಪಿ.ಆರ್. 383 ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ.

## ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ಶ್ರೀ ಎಸ್. ರಾಮಸ್ವಾಮಿ, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಅವರ ವಿರುದ್ಧದ ವಿಚಾರಣೆಯನ್ನು ಮುಕ್ತಾಯಗೊಳಿಸಿ, ದೋಷಮುಕ್ತರನ್ನಾಗಿಸುವ ಬಗ್ಗೆ - ಆದೇಶ.

**ಓದಲಾಗಿದೆ:**
1. ಸರ್ಕಾರದ ನೋಟೀಸ್ ಸಂಖ್ಯೆ: ಆನಾಸ 293 ಆಇಸೇ 2002, ದಿನಾಂಕ: 6-2-2003.
2. ಸರ್ಕಾರದ ನೋಟೀಸ್ ಸಂಖ್ಯೆ: ಆನಾಸ 293 ಆಇಸೇ 2002, ದಿನಾಂಕ: 29-5-2003.
3. ಶ್ರೀ ಕೆ. ಈಶ್ವರ್ ಭಟ್, ನಿವೃತ್ತ ಜಿಲ್ಲಾ ಮತ್ತು ಸೆಷನ್ಸ್ ನ್ಯಾಯಾಧೀಶರು, ಮತ್ತು ವಿಚಾರಣಾಧಿಕಾರಿಗಳು, ಅವರ ದಿನಾಂಕ: 3-11-2003ರ ವರದಿ.

**ಪ್ರಸ್ತಾವನೆ:**

ಶ್ರೀ ಎಸ್. ರಾಮಸ್ವಾಮಿ, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಅವರು ಬೆಂಗಳೂರು ಗ್ರಾಮಾಂತರ ಜಿಲ್ಲಾ ಉಪ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ, ಜಿಲ್ಲೆಯ ಬಡತನ ರೇಖೆಗಿಂತ ಕೆಳಗಿರುವ ಬಡ ಕುಟುಂಬಗಳನ್ನು ಗುರುತಿಸುವ ಸಲುವಾಗಿ ಅವಶ್ಯವಿದ್ದ ಪ್ರಪತ್ರಗಳನ್ನು ಮುದ್ರಿಸಿಕೊಳ್ಳಲು ಸರ್ಕಾರ ನಿಗದಿಪಡಿಸಿದ ದರಕ್ಕಿಂತ ಹೆಚ್ಚಿನ ದರ ನೀಡಿ, ಖಾಸಗಿ ಮುದ್ರಣಾಲಯದಿಂದ ಮುದ್ರಿಸಿಕೊಂಡಿದ್ದರಿಂದ, ಸರ್ಕಾರಕ್ಕೆ ರೂ.45,000-00 ಹೆಚ್ಚುವರಿ ಖರ್ಚು ಬಂದಿದ್ದ ಕಾರಣ, ಸದರಿ ನಷ್ಟಕ್ಕೆ ಅವರನ್ನೇ ಹೊಣೆಗಾರರನ್ನಾಗಿ ಮಾಡಿ, ಮೇಲೆ (1)ರಲ್ಲಿ ಓದಲಾದ ದೋಷಾರೋಪಣೆಯನ್ನು ಜಾರಿ ಮಾಡುವ ಮೂಲಕ ಶಿಸ್ತು ಕ್ರಮವನ್ನು ಪ್ರಾರಂಭಿಸಲಾಗಿತ್ತು. ಆಪಾದಿತ ಅಧಿಕಾರಿಯು ತನ್ನ ವಿರುದ್ಧದ ದೋಷಾರೋಪಣೆಗೆ ಉತ್ತರಿಸುತ್ತಾ, ದೋಷಾರೋಪಣೆಯನ್ನು ನಿರಾಕರಿಸಿದ್ದರಿಂದ, ಪ್ರಕರಣದಲ್ಲಿನ ಸತ್ಯಾಸತ್ಯತೆಯನ್ನು ಕಂಡುಕೊಳ್ಳುವ ಉದ್ದೇಶದಿಂದ, ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಪ್ರಕರಣದ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶಿಸಲಾಗಿತ್ತು. ಸರ್ಕಾರದ ಆದೇಶದಂತೆ ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು, ತಮ್ಮ ವರದಿಯಲ್ಲಿ ತಿಳಿಸಿರುವ ಕಾರಣಗಳಿಂದ ಆಪಾದಿತ ಅಧಿಕಾರಿಯ ವಿರುದ್ಧದ ಆರೋಪ ಸಾಬೀತಾಗಿಲ್ಲ ಎಂಬುದಾಗಿ ತಿಳಿಸುತ್ತಾ, ಮೇಲೆ (3)ರಲ್ಲಿ ಓದಲಾದ ವಿಚಾರಣಾ ವರದಿಯನ್ನು ಸಲ್ಲಿಸಿದ್ದಾರೆ. ವಿಚಾರಣಾಧಿಕಾರಿಗಳ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರ, ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು, ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 293 ಆಇಸೇ 2002, ಬೆಂಗಳೂರು, ದಿನಾಂಕ: 22ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಕಾರಣಗಳ ಹಿನ್ನೆಲೆಯಿಂದಾಗಿ, ಶ್ರೀ ಎಸ್. ರಾಮಸ್ವಾಮಿ, ನಿವೃತ್ತ ಉಪ ನಿರ್ದೇಶಕರು, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆ, ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸಿ ಸರ್ಕಾರವು ಇವರನ್ನು ದೋಷಾರೋಪಣೆಯಿಂದ ದೋಷಮುಕ್ತರನ್ನಾಗಿಸಿದೆ.

ಈ ವಿಚಾರಣೆ ಹೂಡದಿದ್ದಲ್ಲಿ ಅಧಿಕಾರಿಯು ಯಾವ ಸವಲತ್ತುಗಳಿಗೆ ಅರ್ಹರಿರುತ್ತಿದ್ದರೋ, ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಜೆ. ಶ್ರೀನಿವಾಸನ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 384

**ಕಂದಾಯ ಸಚಿವಾಲಯ**

**ಸುತ್ತೋಲೆ ಕಂಇ 02 ಎಡಿಇ 2004, ಬೆಂಗಳೂರು, ದಿನಾಂಕ: 7ನೇ ಫೆಬ್ರವರಿ 2004**

**ವಿಷಯ:** ಅಸ್ವಾಭಾವಿಕ ಮರಣ ಪ್ರಕರಣಗಳಲ್ಲಿ ಶವ ಪಂಚನಾಮೆ ಮತ್ತು ತನಿಖೆಯನ್ನು ಕ್ಷಿಪ್ರವಾಗಿ ನಡೆಸುವ ಬಗ್ಗೆ.

ಅಸ್ವಾಭಾವಿಕ ಮರಣ ಪ್ರಕರಣಗಳು ಅಂದರೆ ಒಬ್ಬ ವ್ಯಕ್ತಿಯು ಆತ್ಮಹತ್ಯೆ ಮಾಡಿಕೊಂಡಿದ್ದಾನೆಂದು ಅಥವಾ ಮತ್ತೊಬ್ಬನಿಂದ, ಒಂದು ಪ್ರಾಣಿಯಿಂದ, ಯಂತ್ರದಿಂದ, ಅಪಘಾತದಿಂದ ಕೊಲ್ಲಲ್ಪಟ್ಟಿದ್ದಾನೆಂದು ಅಥವಾ ಬೇರೆ ರೀತಿಯಲ್ಲಿ ಸಂಶಯಕ್ಕೆಡೆಕೊಡುವ ರೀತಿಯಲ್ಲಿ ಸತ್ತಿದ್ದಾನೆಂದು ಪೊಲೀಸ್ ಅಧಿಕಾರಿಗಳಿಗೆ ಮಾಹಿತಿ ದೊರೆತಾಗ, ಅವನು ಶವ ಪಂಚನಾಮೆಯನ್ನು ನಡೆಸಲು ಶಕ್ತಗೊಳಿಸಲಾದ ತೀರ ಹತ್ತಿರದ ಕಾರ್ಯನಿರ್ವಾಹಕ ದಂಡಾಧಿಕಾರಿಗೆ ಮಾಹಿತಿಯನ್ನು ನೀಡಬೇಕಾಗುತ್ತದೆ. ಇದೇ ರೀತಿ ವಿವಾಹವಾದ ಏಳು ವರ್ಷಗಳ ಅವಧಿಯಲ್ಲಿ ಯಾವುದೇ ಮಹಿಳೆಯು ಆತ್ಮಹತ್ಯೆ ಮಾಡಿಕೊಂಡಿದ್ದಲ್ಲಿ ಅಥವಾ ಬೇರೊಬ್ಬ ವ್ಯಕ್ತಿಯಿಂದ ಆಕೆ ಕೊಲ್ಲಲ್ಪಟ್ಟಿದ್ದಾಳೆ ಎಂಬ ಸಂಶಯಕ್ಕೆ ಎಡೆಮಾಡಿಕೊಡುವ ಸಂದರ್ಭದಲ್ಲಿ ಆಕೆ ಸತ್ತಿದ್ದರೆ, ಅಂಥ ಪ್ರಕರಣಗಳಲ್ಲಿಯೂ ಸಹ ಪೊಲೀಸ್ ಅಧಿಕಾರಿಯು ಮೇಲೆ ತಿಳಿಸಿದ ಪ್ರಕಾರ ಕ್ರಮ ಜರುಗಿಸಬೇಕಾಗುತ್ತದೆ.

ಇಂತಹ ಸಂದರ್ಭಗಳಲ್ಲಿ ಕಾರ್ಯನಿರ್ವಾಹಕ ದಂಡಾಧಿಕಾರಿಗಳು ಕ್ಷಿಪ್ರಗತಿಯಲ್ಲಿ ಕಾರ್ಯೋನ್ಮುಖರಾಗಿ Cr.PC ಕಲಂ 176ರ ಅಡಿ ನಿಗದಿಪಡಿಸಲಾದ ವಿಧಿ ವಿಧಾನಗಳನ್ನು ಅನುಸರಿಸಿ ಶವ ಪಂಚನಾಮೆ, ತನಿಖೆ ಇತ್ಯಾದಿಗಳನ್ನು ನಡೆಸಬೇಕಾಗುತ್ತದೆ. ಹಲವಾರು ಸಂದರ್ಭಗಳಲ್ಲಿ ಮರಣ ಶ್ಯಯ್ಯೆಯಲ್ಲಿರುವ ಮಹಿಳೆಯ ಮರಣ ಪೂರ್ವ (Dying Declaration) ಹೇಳಿಕೆಯನ್ನು ದಾಖಲಿಸಬೇಕಾಗುತ್ತದೆ. ಆದರೆ ಕಾರ್ಯನಿರ್ವಾಹಕ ದಂಡಾಧಿಕಾರಿಗಳು ಪೊಲೀಸರಿಂದ ಮಾಹಿತಿ ಬಂದಿದ್ದಾಗ್ಯೂ ಕೂಡಲೇ ವಿಷಯವನ್ನು ಗಂಭೀರವಾಗಿ ತೆಗೆದುಕೊಳ್ಳದೆ, ಯಾವುದಾದರೂ ಒಂದು ನೆಪ ಹೇಳಿ, ಶವ ಪಂಚನಾಮೆಯನ್ನು ನಿಗದಿತ ಸಮಯದಲ್ಲಿ ನಡೆಸದೆ, ಅಥವಾ ನಿಗದಿತ ಕ್ರಮ ಅನುಸರಿಸಿ ನಡೆಸದೇ ಇರುವ ಕೆಲವು ಪ್ರಕರಣಗಳು ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಇಂತಹ ಪ್ರಕರಣಗಳಲ್ಲಿ ಅಪರಾಧಿಗಳು ಕಾನೂನಿನ ಹಿಡಿತದಿಂದ ತಪ್ಪಿಸಿಕೊಳ್ಳಲು ಅವಕಾಶ ಮಾಡಿಕೊಟ್ಟಂತೆ ಆಗುತ್ತದೆ ಹಾಗೂ ಮೃತರ ಕುಟುಂಬ ವರ್ಗದವರಿಗೆ ನ್ಯಾಯ ನಿರಾಕರಣೆಯಾಗಿ ಕಾನೂನಿನ ಉದ್ದೇಶವೇ ವಿಫಲಗೊಳ್ಳುತ್ತದೆ. ಇಂತಹ ಒಂದು ಅಸಹಜ ಸಾವಿನ ಪ್ರಕರಣದಲ್ಲಿ ಮಾನ್ಯ ಉಚ್ಚ ನ್ಯಾಯಾಲಯವು ಸಂಬಂಧಪಟ್ಟ ಕಾರ್ಯನಿರ್ವಾಹಕ ದಂಡಾಧಿಕಾರಿ ತೋರಿರುವ ನಿರ್ಲಕ್ಷತನದ ಬಗ್ಗೆ ಬಹಳ ತೀವ್ರವಾಗಿ ತರಾಟೆಗೆ ತೆಗೆದುಕೊಂಡು, ಇದನ್ನು ಸಂಬಂಧಪಟ್ಟ ಎಲ್ಲಾ ಅಧಿಕಾರಿಗಳ ಗಮನಕ್ಕೆ ತಂದು ಇನ್ನು ಮುಂದೆ ಇಂತಹ ಲೋಪಗಳಿಗೆ ಅವಕಾಶ ನೀಡದಂತೆ ನೋಡಿಕೊಳ್ಳಲು ಸೂಚಿಸಿರುತ್ತದೆ. ಮಾನ್ಯ ಉಚ್ಚ ನ್ಯಾಯಾಲಯವು Criminal Appeal No. 1548/2002, ದಿನಾಂಕ: 4.9.2003 ರಲ್ಲಿ ಮಾಡಿರುವ ಆದೇಶದ ಉದ್ಧೃತ ಭಾಗ ಈ ಕೆಳಕಂಡಂತಿದೆ.

6. Before parting with the judgement, we need to observe that the entire complexion of the case would obviously have been different had the Tahsildar PW 17 responded to the request from the Police that he should record the dying declaration of Shabana. We need to remind this Officer and other similarly situated Officers that the law prescribes that an independent authority other than the Police such as one of the local Govt. Officers should be asked to record the dying declaration in order to add credibility and also to ensure that this is properly done. This is a case in which PW 17 admits that the request was conveyed to him and that he turned it down on the ground that he is busy with census work. This Court takes a serious view of what has happened and desires to make it very clear that the request from the police to record dying declaration is a top priority matter, that it cannot wait at all and this obligation cannot be avoided and that this court will be required to take stringent action against the Officers who abdicate their responsibility as has happened in the present case. The consequences are obvious because the trial court and the High Court were required to reject the dying declaration, which may not have otherwise happened. Since, this is not the first time where an incident of this type has taken place resulting in the case going by default, the Registrar General to forward a copy of this judgement to the Principal Secretary to the Government, who in turn shall bring it to the notice of all the Officers in the State that under no circumstances can or should they decline the request from the Police to forthwith record dying declarations.

ಮಾನ್ಯ ಉಚ್ಛ ನ್ಯಾಯಾಲಯವು, ಗಮನಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಅಸ್ವಾಭಾವಿಕ ಮರಣ ಪ್ರಕರಣಗಳಲ್ಲಿ ಅದರಲ್ಲೂ ವಿಶೇಷವಾಗಿ ವಿವಾಹವಾದ ಏಳು ವರ್ಷಗಳ ಅವಧಿಯಲ್ಲಿ ಯಾವುದೇ ಮಹಿಳೆಯು ಅಸ್ವಾಭಾವಿಕವಾಗಿ ಮರಣಹೊಂದಿರುವಂತಹ ಪ್ರಕರಣಗಳಲ್ಲಿ Cr.PC ಕಲಂ 174ರ ಅಡಿಯಲ್ಲಿ ಪೊಲೀಸರಿಂದ ಮಾಹಿತಿ ಬಂದಕೂಡಲೇ ಸಂಬಂಧಪಟ್ಟ ಕಾರ್ಯನಿರ್ವಾಹಕ ದಂಡಾಧಿಕಾರಿಗಳು ಯಾವುದೇ ವಿಳಂಬಕ್ಕೆ ಆಸ್ಪದ ನೀಡದೆ ಕ್ಷಿಪ್ರಗತಿಯಲ್ಲಿ Cr.PC ಕಲಂ 176ರ ಅಡಿಯಲ್ಲಿ ನಿಗದಿಪಡಿಸಿರುವ ವಿದಿ ವಿಧಾನಗಳನ್ನು ಚಾಚೂ ತಪ್ಪದೆ ಅನುಸರಿಸಲು ಸೂಚಿಸಿದೆ. Cr.PC ಕಲಂ 174 ಹಾಗೂ 176ರ ಉದ್ಧೃತ ಭಾಗವನ್ನು ಈ ಸುತ್ತೋಲೆಗೆ ಲಗತ್ತಿಸಿದೆ. ಒಂದು ವೇಳೆ ಇಂತಹ ಪ್ರಕರಣಗಳಲ್ಲಿ ಕಾರ್ಯ ನಿರ್ವಾಹಕ ದಂಡಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಯು ನಿರ್ಲಕ್ಷತನ ಮತ್ತು ಕರ್ತವ್ಯ ಲೋಪ ಎಸಗಿರುವುದು ಮೇಲು ನೋಟಕ್ಕೆ ಕಂಡು ಬಂದ ತಕ್ಷಣವೇ ಸದರಿ ಅಧಿಕಾರಿಯನ್ನು ನಿರ್ದಾಕ್ಷಿಣ್ಯವಾಗಿ ಸೇವೆಯಿಂದ ಅಮಾನತ್ತಿನಲ್ಲಿಟ್ಟು ಮುಂದಿನ ಕ್ರಮ ಜರುಗಿಸಲಾಗುವುದೆಂದು ಈ ಮೂಲಕ ತಿಳಿಯಪಡಿಸಿದೆ.

**ವಿನಯ್ ಕುಮಾರ್**

ಸರ್ಕಾರದ ಪ್ರಧಾನ ಕಾರ್ಯದರ್ಶಿ, ಕಂದಾಯ ಇಲಾಖೆ.

**Extract of Section 174 and 176 of the Code of Criminal procedure 1973**

174. **Police to enquire and report on suicide, etc.-**(1) When the officer in charge of a police station or some other police officer specially empowered by the State Government in that behalf receives information that a person has committed suicide, or has been killed by another or by an animal or by machinery or by any accident, or has died under circumstances raising a reasonable suspicion that some other person has committed an offence, he shall immediately give information thereof to the nearest executive magistrate empowered to hold inquests, and unless otherwise directed by any rule prescribed by the State Government, or by any general or special order of the District or Sub-divisional Magistrate, shall proceed to the place where the body of such deceased person is, and there, in the presence of two or more respectable inhabitants of the neighbourhood, shall make an investigation, and draw up a report of the apparent cause of death, describing such wounds, fractures, bruises and other marks of injury as may be found on the body, and stating in what manner, or by what weapon or instrument (if any), such marks appear to have been inflicted.

(2) The report shall be signed by such police officer and other persons, or by so many of them as concur therein, and shall be forthwith forwarded to the District Magistrate or the Sub-divisional Magistrate.

(3) [when

(i) the case involves suicide by a woman within seven years of her marriage; or

(ii) the case relates to the death of a woman within seven years of her marriage in any circumstances raising a reasonable suspicion that some other person committed an offence in relation to such woman; or

(iii) the case relates to the death of a woman within seven years of her marriage and any relative of the woman has made a request in this behalf; or

(iv) there is any doubt regarding the cause of death; or

(v) the police officer for any other reason considers it expedient so to do,

he shall] subject to such rules as the State Government may prescribe in this behalf, forward the body, with a view to its being examined, to the nearest Civil Surgeon, or other qualified medical man appointed in this behalf by the State Government, if the state of the weather and the distance admit of its being so forwarded without risk of such putrefaction on the road as would render such examination useless.

(4) The following Magistrate are empowered to hold inquests, namely, any District Magistrate or Sub-divisional Magistrate or any other Executive Magistrate specially empowered in this behalf by the State Government or the District Magistrate.

**176. Inquiry by Magistrate into cause of death. –** (1) When any person dies while in the custody of police or when the case is of the nature referred to in clause (i) or clause (ii) of sub-section (3) of section 174, the nearest Magistrate empowered to hold inquests shall, and in any other case mentioned in sub-section (1) of Sec.174, any Magistrate so empowered may hold an inquiry into the cause of death either instead of, or in addition to, the investigation held by the police office; and if he does so, he shall have all the powers in conducting it which he would have in holding an inquiry into an offence.

(2) The Magistrate holding such an inquiry shall record the evidence taken by him in connection therewith in any manner hereinafter prescribed according to the circumstances of the case.

(3) Whenever such Magistrate considers it expedient to make an examination of the dead body of any person who has been already interred, in order to discover the cause of his death the Magistrate may cause the body to be disinterred and examined.

(4) Where an inquiry is to be held under this section, the Magistrate shall, wherever practicable, inform the relatives of the deceased whose names and addresses are known, and shall allow them to remain present at the inquiry.

**Explanation:** In this section, the expression "relative" means parents, children, brothers, sisters and spouse.

**VADAGAVE BASAVARAJ**

P.R. 385 Section Officer, Revenue Department (Services-3)

**ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ**

**ತಿದ್ದುಪಡಿ ಸಂಖ್ಯೆ: ಗ್ರಾಅಪ 81 ಸ್ವಜಯೋ 03, ಬೆಂಗಳೂರು, ದಿನಾಂಕ: 20ನೇ ಮಾರ್ಚ್ 2004**

**ವಿಷಯ:** 10ನೇ ಪಂಚವಾರ್ಷಿಕ ಯೋಜನೆ ಅವಧಿಯ ಸರ್ವ ಕುಟುಂಬ ಸಮೀಕ್ಷೆಯ ಅನುಸೂಚಿಯನ್ನು ಮೆ: ಎಂಸಿ ಮತ್ತು ಎಎಲ್, ಮೆಹ್ರಾ ಕಾಂಪ್ಲೆಕ್ಸ್, ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು 560 052 ಇವರು ಮುದ್ರಿಸಿ ಜಿಲ್ಲಾ ಪಂಚಾಯತ್‌ಗೆ ಸರಬರಾಜು ಮಾಡುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶದ ಸಮ ಸಂಖ್ಯೆ ದಿನಾಂಕ:09-01-2004.
2. ಶಿವಮೊಗ್ಗ ಜಿಲ್ಲಾ ಪಂಚಾಯತ್ ಪತ್ರದ ಸಂಖ್ಯೆ ಜಿಪಂಶಿ 15 ಎಸ್‌ಜಿಎಸ್‌ವೈ ವಿವ 30 : 2003-2004 ದಿನಾಂಕ: 18-03-2004.

10ನೇ ಪಂಚವಾರ್ಷಿಕ ಯೋಜನಾವಧಿಯ ಸರ್ವ ಕುಟುಂಬ ಸಮೀಕ್ಷೆಯ ಆದೇಶ ಸಂಖ್ಯೆ ಗ್ರಾಅಪ 81 ಸ್ವಜಯೋ 2003 ದಿನಾಂಕ: 09-01-2004 ರಲ್ಲಿ 10 ಷರತ್ತುಗಳನ್ನು ವಿಧಿಸಲಾಗಿತ್ತು. ಇದರೊಂದಿಗೆ ಷರತ್ತು 11ನ್ನು ಸೇರ್ಪಡಿಸಿ ಓದಿಕೊಳ್ಳುವುದು.

ಷರತ್ತು 11 ಎಂಸಿ ಮತ್ತು ಎಎಲ್, ಮೆಹ್ರಾ ಕಾಂಪ್ಲೆಕ್ಸ್, ನಂ.42, ಮಿಲ್ಲರ್ಸ್ ರಸ್ತೆ, ಬೆಂಗಳೂರು-560 052 ರವರು ಸರಬರಾಜು ಮಾಡಿರುವ ಸರ್ವೆ ಕುಟುಂಬ ಸಮೀಕ್ಷೆಯ ಅನುಸೂಚಿಗಳ ವೆಚ್ಚವನ್ನು ಕೇಂದ್ರ ಸರ್ಕಾರದವರು ಬಿಪಿಎಲ್ ಸೆನ್ಸಸ್‌ಗಾಗಿ ಕೆಳಕಂಡ ಲೆಕ್ಕ ಶೀರ್ಷಿಕೆಯಡಿಯಲ್ಲಿ ನೀಡಿರುವ ಹಣದಿಂದ ಭರಿಸತಕ್ಕದ್ದು.

ಡಿಮ್ಯಾಂಡ್ ನಂ. 67

2501 - ಗ್ರಾಮೀಣಾಭಿವೃದ್ಧಿ ವಿಶೇಷ ಕಾರ್ಯಕ್ರಮಗಳು (ಮುಖ್ಯ ಶೀರ್ಷಿಕೆ)

06-101 - ಸ್ವರ್ಣ ಜಯಂತಿ ಗ್ರಾಮ ಸ್ವರೋಜ್‌ಗಾರ್ ಯೋಜನೆ (ಉಪ ಶೀರ್ಷಿಕೆ)

12- ಡಿಆರ್‌ಡಿಎಗಳಿಗೆ ಸಹಾಯ

1200-31 ಗ್ರಾಂಟ್ಸ್-ಆನ್-ಏಡ್

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ. ಶಾಮಭಟ್**

ಪಿ.ಆರ್. 386 ನಿರ್ದೇಶಕರು (ಸ್ವಉಕಾ) ಹಾಗೂ ಪ.ನಿ. ಸರ್ಕಾರದ ಜಂಟಿ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಶ್ರೀ ಹನುಮಾನ್ ವಿದ್ಯಾವರ್ಧಕ ಸಂಘ, ಕೋರವಾರ, ವಿಜಾಪುರ ಜಿಲ್ಲೆ, ಈ ಸಂಸ್ಥೆಗೆ ನೇಮಕವಾಗಿದ್ದ ಆಡಳಿತಾಧಿಕಾರಿಯ ಅವಧಿ ವಿಸ್ತರಿಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ:ಕಂಇ 45 ಮುನೋಸೊ 2001, ದಿನಾಂಕ:23-3-2002.

**ಪ್ರಸ್ತಾವನೆ:**

ಮೇಲೆ ಓದಲಾದ ಆದೇಶದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳ ವರದಿ ಹಾಗೂ ಶಿಕ್ಷಣ ಇಲಾಖೆಯ ಪ್ರಸ್ತಾವನೆಯನ್ನು ಪರಿಶೀಲಿಸಿ, ಉಚ್ಚ ನ್ಯಾಯಾಲಯದ ಅಂತಿಮ ಆದೇಶಕ್ಕೆ ಒಳಪಟ್ಟು, ಶ್ರೀ ಹನುಮಾನ್ ವಿದ್ಯಾವರ್ಧಕ ಸಂಘಕ್ಕೆ ಸಂಘಗಳ ನೋಂದಣಿ ಕಾಯ್ದೆ, 1960ರ ಪ್ರಕಾರ ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಯಿತು, ಹಾಗೂ ಕಾಲಕಾಲಕ್ಕೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದೆ. ಅಂತಿಮವಾಗಿ ಸರ್ಕಾರದ ದಿನಾಂಕ:15-07-2003 ರ ಆದೇಶದಲ್ಲಿ ದಿನಾಂಕ: 22-9-2003ರವರೆಗೆ ವಿಸ್ತರಿಸಲಾಗಿದೆ. ಸದರಿ ಸಂಸ್ಥೆ ಕುರಿತು ಪ್ರಕರಣವು ನ್ಯಾಯಾಲಯದಲ್ಲಿ ಇರುವುದರಿಂದ, ಸಂಸ್ಥೆ ಕುರಿತು ಕ್ರಮ ಜರುಗಿಸುವುದು ಸಾಧ್ಯವಾಗಿಲ್ಲವಾದ್ದರಿಂದ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 55 ಮುನೋಸೊ 2003, ಬೆಂಗಳೂರು, ದಿನಾಂಕ: 18ನೇ ಮಾರ್ಚ್ 2004**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಸಾರ್ವಜನಿಕ ಹಿತದೃಷ್ಟಿಯಿಂದ, ಶ್ರೀ ಹನುಮಾನ್ ವಿದ್ಯಾವರ್ಧಕ ಸಂಘ, ಕೋರವಾರ, ವಿಜಾಪುರ ಜಿಲ್ಲೆ, ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27-ಎ ಪ್ರಕಾರ ನೇಮಕ ಮಾಡಲಾದ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ:23-09-2003 ರಿಂದ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ, ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ವಿಸ್ತರಿಸಿದೆ. ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಸಂಸ್ಥೆಯ ಅವ್ಯವಹಾರಗಳನ್ನು ಸರಿಪಡಿಸಿ, ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಆಡಳಿತವನ್ನು ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಜಿ. ನಾರಾಯಣ**

ಪಿ.ಆರ್. 390 ಪೀಠಾಧಿಕಾರಿ, ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ)